# ವಾನಸಿ

ತಿಂಗಳ ಪತ್ರಿಕೆ

ಸೆಪ್ಟೆಂಬರ್ : 1997

❋ ಕ್ವಿನಕ್ರೈನ್ ಒಂದು ಜಾಗತಿಕ ನೋಟ

❋ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ : ಸುಪ್ರೀಂ ಕೋರ್ಟಿನ ಸ್ವಾಗತಾರ್ಹ ತೀರ್ಪು

❋ ಒಂದು ಸಾವಿನ ಸುತ್ತ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 7

ಸೆಪ್ಟೆಂಬರ್ : 1997





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಕೆಲಸ ಮಾಡುವ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ಕುರಿತಂತೆ ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯವು ಚಾರಿತ್ರಿಕ ತೀರ್ಪನ್ನಿತ್ತಿದೆ. ತೀರ್ಪು ನೀಡುವ ಮೂಲಕ, ಕೆಲಸ ಮಾಡುವ ಸ್ಥಳಗಳಲ್ಲಿನ ಮಹಿಳೆಯರ, ವಸ್ತುಸ್ಥಿತಿಯನ್ನು ಗುರುತಿಸಿದೆ. ತೀರ್ಪನ್ನು ಜಾರಿಗೊಳಿಸುವುದು ಒಂದು ಮಹತ್ವದ ಕೆಲಸ. ಆದರೆ ದೇಶದೆಲ್ಲೆಡೆಯ ಮಹಿಳಾ ಸಂಘಟನೆಗಳಿಗೆ ಈ ತೀರ್ಪೊಂದು ಮೈಲಿಗಲ್ಲು. ಕೆಲಸ ಮಾಡುವ ಸ್ಥಳಗಳಲ್ಲಿ ಆಮೂಲಾಗ್ರ ಬದಲಾವಣೆಗಾಗಿ ನಡೆಸಿರುವ ಹೋರಾಟದ ಹಾದಿಯಲ್ಲಿ ಇದೊಂದು ಮಹತ್ವದ ಹೆಜ್ಜೆ.

ನ್ಯಾಯಾಂಗ ವ್ಯವಸ್ಥೆಯೇ ಲಿಂಗಬೇಧ ನೀತಿಯಿಂದ ತುಂಬಿರುವಂತಹ ಸಂದರ್ಭದಲ್ಲಿ, ಈ ತೀರ್ಪು ಗಮನಾರ್ಹ ಬದಲಾವಣೆಯೇ ಹೌದು. ಸಮಾನ ವೇತನ, 'ಹೆರಿಗೆ ಸಂಬಂಧಿ ಸೌಲಭ್ಯ ಕಾಯಿದೆಯನ್ನು ಹೊರತು ಪಡಿಸಿ ಹೆಚ್ಚು ಕಡಿಮೆ ಉಳಿದೆಲ್ಲ ಕಾರ್ಮಿಕ ಸಂಬಂಧಿ ಕಾನೂನುಗಳು ಲಿಂಗ ತಟಸ್ಥವೇ ಹೌದು. ಸದ್ಯ ಈ ತೀರ್ಪು ಮಹಿಳೆಯರ ನಿಜಸ್ಥಿತಿಯ, ಅನುಭವಗಳ ನಿರ್ದಿಷ್ಟತೆಯನ್ನು ಪರಿಗಣಿಸಿದೆ. ರಾಜಾಸ್ಥಾನದ ಸಾತಿನ್ನರ ಹೋರಾಟದ ಮೂಲಕ ಈ ತೀರ್ಪು ಹೊರಬಂದುದೊಂದು ಮಹತ್ವದ ಅಂಶ. ಅದರಲ್ಲೂ ಹೋರಾಟದ ಸಂದರ್ಭದಲ್ಲಿ ಮಾಲೀಕ ಸ್ಥಾನದಲ್ಲಿದ್ದುದು ಸರ್ಕಾರವೇ ಆದ್ದರಿಂದ ತೀರ್ಪು ಚರಿತ್ರಾರ್ಹವೇ ಸರಿ. ಇದು ತನ್ನ ನಿಲುವನ್ನು ಸಮರ್ಥಿಸಲು ಮಹಿಳಾ ಚಳುವಳಿಯ ಅನುಭವದ ದೃಷ್ಟಿಕೋನದ ಸೆಲೆಯಿಂದಲೆ ಬಂದಿರುವುದರಿಂದ ಚಳುವಳಿಗೆ ಒಂದು ರಾಜಕೀಯ ಸಮಂಜಸತೆಯನ್ನು ನೀಡುತ್ತದೆ. ಮಹಿಳಾ ಚಳುವಳಿಯ ಭಾಷೆಯನ್ನು ರಾಜ್ಯ ವ್ಯವಸ್ಥೆ ಗುರುತಿಸುವಂತೆಯೂ ಒಪ್ಪಿಕೊಳ್ಳುವಂತೆಯು ಮಾಡುವಲ್ಲಿ ನಡೆಸಿದ ದೀರ್ಘ, ನಿರಂತರ ಹೋರಾಟದ ಫಲವೇ ಈ ತೀರ್ಪು ಎನ್ನಬಹುದು. ರಾಜ್ಯ ವ್ಯವಸ್ಥೆಯು ಯಾವಾಗಲೂ ಚಳುವಳಿಯ ಸಾಂಕೇತಿಕತೆಯನ್ನು ಬಳಸಿಕೊಂಡಿರುವುದೇ ಹೆಚ್ಚು. ಈ ತೀರ್ಪು ಮಾತ್ರ ಚಳುವಳಿಯ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳಲು, ಅಳವಡಿಸಿಕೊಳ್ಳಲು ನಡೆಸಿದ ಗಂಭೀರ ಪ್ರಯತ್ನವೆನ್ನಬಹುದು.

ಕೆಲಸ ಮಾಡುವ ಸ್ಥಳ ಕುರಿತಂತೆ ಇರುವ ಮಾಮೂಲಿ ನ್ಯಾಯಾಂಗದ ವಿವರಣೆಗಿಂತ ಭಿನ್ನವಾಗಿರುವ ಈ ತೀರ್ಪು ಗಮನಾರ್ಹವಾದುದು. ಅಲ್ಲದೆ ತನ್ನ ಪರಿಧಿಯೊಳಗೆ ಸಂಬಳ ಪಡೆಯದ ಕಾರ್ಮಿಕರನ್ನೂ ಒಳಗೊಂಡಿದೆ. ಇದು ಅಸಾಧ್ಯವೇ ಎನಿಸಿಕೊಂಡಂತ ಹಂತಗಳಲ್ಲೂ ಕಾರ್ಯ ಚಟುವಟಿಕೆಯನ್ನು ಹಮ್ಮಿಕೊಳ್ಳಲು ಹೊಸ ಸಾಧ್ಯತೆಗಳನ್ನು ನೀಡುತ್ತದೆ.

ಮತ್ತೊಂದು ಹಂತದಲ್ಲಿ ಮಾಮೂಲಿಯಾಗಿ ಕಡೆಗಣಿಸಲ್ಪಡುವ ಬೇರೆ ಬೇರೆ ರೀತಿಯ ಕಿರುಕುಳವನ್ನು ತನ್ನ ವಿಶಾಲ ವಿವರಣೆಯಲ್ಲೊಳಗೊಂಡಿದೆ. ಉದಾಹರಣೆಗೆ ಲೈಂಗಿಕಾರ್ಥದ ಆಹ್ವಾನ ಅಥವಾ ಟೀಕೆಗಳನ್ನು ಲೈಂಗಿಕ ಕಿರುಕುಳದ ಒಂದು ರೀತಿ ಎಂದು ತೀರ್ಪು ಪರಿಗಣಿಸುತ್ತದೆ. ಈ ರೀತಿಯ ಕಿರುಕುಳ ಒಂದು ವಿಷಯವೇ ಅಲ್ಲವೆಂದು ಪರಿಗಣಿಸುವುದನ್ನು ಮಹಿಳೆಯರು ನಿತ್ಯ ಅನುಭವಿಸುತ್ತಾರೆ. ಕೆಲಸ ಮಾಡುವ ಸ್ಥಳಗಳಲ್ಲಿ, ಸಂಕೀರ್ಣ ರೀತಿಯಲ್ಲಿ ಪ್ರಕಟಗೊಳ್ಳುವ ಲೈಂಗಿಕ ದುರ್ವತನೆಗಳನ್ನು ತೀರ್ಪು ತಳ್ಳಿ ಹಾಕದೆ ಇರುವುದು ಸಂತಸದ ವಿಷಯ. ಆರ್ಥಿಕವಾಗಿ, ಸಾಮಾಜಿಕವಾಗಿ ಸುಲಭವಾಗಿ ಬಲಿಪಶುವಾಗಿ ಬಿಡುವಂತಹ ಮಹಿಳೆ ಅಂತಹ ಸಂದರ್ಭಗಳಲ್ಲಿ ಪ್ರತಿಭಟಿಸುವುದಕ್ಕಿಂತ ಮೌನವಾಗಿರುವುದೇ ಹೆಚ್ಚು. ತೀರ್ಪು, ತಕ್ಷಣವೆ ಕೆಲಸ ಮಾಡುವ ಸ್ಥಳಗಳಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತಂದು ಸ್ಥಳವನ್ನು ಮಹಿಳೆಯರಿಗೆ ಸುಭದ್ರ ಸ್ವರ್ಗವಾಗಿಸುವುದಿಲ್ಲವಾದರೂ, ಮಹಿಳೆಯರ ದೃಷ್ಟಿಯಿಂದ ಅವರ ನೈಜಸ್ಥಿತಿಯನ್ನು ಒಪ್ಪಿಕೊಂಡಿದೆ ಎಂಬುದು ನಿಚ್ಚಳ. ಇದು ನ್ಯಾಯಾಂಗ ವ್ಯವಸ್ಥೆಯಿಂದ ನಾವು ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚೆನ್ನಬಹುದು.

ಕೆಲಸ ಮಾಡುವ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ಕುರಿತಂತೆ ಕಾರ್ಮಿಕ ಸಂಘಟನೆಗಳು ಮಹಿಳಾ ಹಾಗು ಪುರುಷ ಕಾರ್ಮಿಕರನ್ನು sensitize ಮಾಡುವಲ್ಲಿ ಪ್ರಮುಖ ಪಾತ್ರವಹಿಸಬಹುದು. ಕಾರ್ಮಿಕ ಸಂಘಟನೆಗಳು ಮಹಿಳಾ ಸಂಬಂಧಿ ವಿಶಯಗಳನ್ನು ತೆಗೆದುಕೊಳ್ಳಲು ನಿರಾಕರಿಸುತ್ತವೆ ಎಂಬ ವಿಶಯವನ್ನು ಗಮನದಲ್ಲಿರಿಸಿಕೊಂಡಾಗ್ಯು ಸಹ ಈ ತೀರ್ಪು ಅನೇಕ ಸಾಧ್ಯತೆಗಳನ್ನು ಮುಂದುವರಿಸುತ್ತದೆ. ಅಸಂಖ್ಯಾತ ಮಹಿಳೆಯರಿರುವ ಅಸಂಘಟಿತ ಕ್ಷೇತ್ರದಲ್ಲಿ ಈ ತೀರ್ಪನ್ನು ಉಪಯೋಗಿಸಿಕೊಳ್ಳುವುದು ಕಷ್ಟಕರ. ಇಲ್ಲಿ ಮಹಿಳಾ ಸಂಘಟನೆಗಳ, ಇತರ ಸಂಘಟನೆಗಳ ಮಧ್ಯಸ್ಥಿಕೆ ಸಕ್ರಿಯವಾಗಬೇಕಾಗುವುದು ಅವಶ್ಯ. ಇದೇನು ಸಣ್ಣ ಕೆಲಸವಲ್ಲ. ತೀರ್ಪು ಎಲ್ಲ ಮಹಿಳೆಯರಿಗೂ ಎಲ್ಲ ಉತ್ತರಗಳನ್ನೇನು ನೀಡುವುದಿಲ್ಲ. ಅದು, ಮಹಿಳಾ ಚಳುವಳಿಯು ಹಿಡಿತಕ್ಕೆ ತೆಗೆದುಕೊಂಡು ಉಪಯೋಗಿಸಿಕೊಳ್ಳಬೇಕಾದ ಅವಕಾಶವನ್ನಷ್ಟೆ ಪ್ರತಿನಿಧಿಸುತ್ತದೆ. ಮುಂದೆ ಈ ತೀರ್ಪು ಜಾಗೃತ ನ್ಯಾಯಾಂಗ, ರಾಜಕೀಯ ಕ್ರಿಯೆಯಿಂದ ಬಲಗೊಳ್ಳಬೇಕಿದೆ. ಇದು ನಮ್ಮ ಮುಂದಿರುವ ಸವಾಲು.

# ಕ್ವಿನಕ್ರೈನ್ : ಒಂದು ಜಾಗತಿಕ ನೋಟ

'ಸಹೇಲಿ'

ಕ್ವಿನಕ್ರೈನ್ ಅನ್ನು ಪ್ರಶ್ನಾರ್ಹ ರೀತಿಯಲ್ಲಿ ಗರ್ಭ ನಿರೋಧಕವಾಗಿ ದೊಡ್ಡ ರೀತಿಯಲ್ಲಿ ಬಳಕೆ ಮಾಡುತ್ತಿರುವ ಕತೆ ಬರೀ ಭಾರತಕ್ಕೆ ಸೀಮಿತವಾಗಿಲ್ಲ. ಕಳೆದ 20ಕ್ಕೂ ಹೆಚ್ಚು ವರ್ಷಗಳಿಂದ ಚಿಲಿ, ಚೀನಾ, ಇಂಡೋನೇಷಿಯಾ, ಫಿಲಿಪ್ಪೈನ್ಸ್, ವಿಯಟ್ನಾಂ, ಬಾಂಗ್ಲಾದೇಶ, ಪಾಕಿಸ್ತಾನ, ಕೋಸ್ಟರೀಕಾ, ಕ್ರೋಷಿಯಾ ಮತ್ತು ಈಜಿಪ್ಟ್‌ಗಳನ್ನು ಒಳಗೊಂಡಂತೆ ಸುಮಾರು 15 ದೇಶಗಳಲ್ಲಿ ಮಹಿಳೆಯರ ಮೇಲೆ ಇದರ ಪ್ರಯೋಗ ಮಾಡಲಾಗುತ್ತಿದೆ. ಈ ಎಲ್ಲ ಮೂರನೇ ವಿಶ್ವ ರಾಷ್ಟ್ರಗಳಲ್ಲಿ ಬಡ ಹೆಂಗಸರ ಮೇಲೆ ಇದರ ಪ್ರಯೋಗಾತ್ಮಕವಾದ ಬಳಕೆ ನಡೆದಿದೆ. ಅಗತ್ಯ ವೈದ್ಯಕೀಯ ಸೇವೆಯ ಕೊರತೆಯಿರುವಂತಹ ಗ್ರಾಮೀಣ ಪ್ರದೇಶಗಳಲ್ಲಿ ಈ ಹೆಂಗಸರಿಗೆ ಅವರ ಮೇಲೆ ಕ್ವಿನಕ್ರೈನ್ ಪ್ರಯೋಗಿಸಲಾಗಿದೆ ಎಂಬ ಮಾಹಿತಿ ನೀಡುವ ಕನಿಷ್ಟ ಸೌಜನ್ಯವನ್ನು ತೋರಲಾಗಿಲ್ಲ, ಅಲ್ಲದೆ ಯಾವುದೇ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ನಿಯಂತ್ರಣ ಮಂಡಳಿಯ ಅಧಿಕೃತ ಒಪ್ಪಿಗೆಯನ್ನು ಕೂಡ ಇಲ್ಲೆಲ್ಲೂ ಪಡೆಯಲಾಗಿಲ್ಲ.

ಈ ಎಲ್ಲ ದೇಶಗಳಲ್ಲೂ ಪ್ರಯೋಗಗಳ ಮಾದರಿ ಒಂದೇ - ಪ್ರಯೋಗಿಸುವವರಿಗೆ ಸರಿಯಾದ ಮಾಹಿತಿ ನೀಡಿ ಒಪ್ಪಿಗೆ ಪಡೆಯುವುದಿಲ್ಲ, ಸಂಶೋಧನಾ ವಿಧಾನಗಳು ಅತ್ಯಂತ ಕಳಪೆ ಮತ್ತು ಅಳವಡಿಸಿದ ನಂತರ ಯಾವುದೇ ಅನುಸರಣಾ ಕ್ರಮಗಳಿರುವುದಿಲ್ಲ. ಇಲ್ಲೆಲ್ಲ ಸಾಮಾನ್ಯವಾಗಿ ಕಂಡುಬರುವ ಮತ್ತೊಂದು ಅಂಶವೆಂದರೆ, ಅಧಿಕೃತ ಸರ್ಕಾರೀ ಸಂಸ್ಥೆಗಳ ಮೂಲಕ ಇಂತಹ ಪ್ರಯೋಗಗಳನ್ನು ನಡೆಸದೆ ಖಾಸಗಿ ವೈದ್ಯರುಗಳ ಮೂಲಕ, ಸರ್ಕಾರೇತರ ಸಂಸ್ಥೆಗಳ ಮೂಲಕ ಇದನ್ನು ನಡೆಸುವುದು. ಈ ಎಲ್ಲ ದೇಶಗಳ ಕ್ವಿನಕ್ರೈನ್ ಸಂಬಂಧೀ ಕಾರ್ಯಾಚರಣೆಯಲ್ಲಿ ಖಡ್ಡಾಯವಾಗಿ ಒಳಗೊಂಡಿರುವವರೆಂದರೆ ಎಲ್ಬನ್ ಕೆಸಲ್ ಮತ್ತು ಸ್ಟೀಫನ್ ಮಮ್‌ಫೋರ್ಡ್‌ರಂತಹ ವ್ಯಕ್ತಿಗಳು ಮತ್ತು IFFH ಮತ್ತು CRPSನಂತ ಸಂಸ್ಥೆಗಳು (ಅಮೇರಿಕಾದಲ್ಲಿ), ಅಂತರರಾಷ್ಟ್ರೀಯ ತಾಯಿ ಮತ್ತು ಶಿಶು ಸಂಸ್ಥೆ (ಸ್ವಿಟ್ಜರ್‌ಲ್ಯಾಂಡ್)ಗಳು.

ಕ್ವಿನಕ್ರೈನ್‌ನ ಪ್ರತಿಪಾದಕರು ಎಲ್ಲ ದೇಶಗಳಲ್ಲೂ ಸಾಮೂಹಿಕವಾಗಿ ಈ ವಿಧಾನದ ದಕ್ಷತೆ ಮತ್ತು ಸುರಕ್ಷರತೆಯ ಬಗ್ಗೆ ಜೋರು ದನಿಯಲ್ಲಿ ಹೇಳಿಕೊಂಡಿದ್ದರೂ, ಅದು ಬಳಕೆಯಾದ ದೇಶಗಳಲ್ಲೆಲ್ಲಾ ಪ್ರತಿಭಟನೆ ಕಂಡುಬಂದಿರುವುದು ಕಣ್ಣಿಗೆ ರಾಚುವಂತಿದೆ. ಇದರ ಕಾನೂನು ಬಾಹಿರ ಬಳಕೆಯನ್ನು ಪ್ರತಿಭಟಿಸಿ ಶ್ರೀಮಂತ ರಾಷ್ಟ್ರಗಳ ಮಹಿಳಾ ಗುಂಪುಗಳು ಮತ್ತು ಆರೋಗ್ಯ ಸಂಘ-ಸಂಸ್ಥೆಗಳು ದನಿಯೆತ್ತಿರುವುದು ಕಂಡುಬಂದಿದೆ.

**ಚಿಲಿ : ಕ್ವಿನಕ್ರೈನ್‌ನ ಜನ್ಮಸ್ಥಳ**

ಕ್ವಿನಕ್ರೈನ್ ಅನ್ನು ಸ್ತ್ರೀಗರ್ಭ ನಿರೋಧಕವಾಗಿ ಮೊಟ್ಟ ಮೊದಲಿಗೆ ರೂಪಿಸಿದ ದೇಶವೇ ಚಿಲಿ. ಕಾಪರ್'ಟಿ' (ವಂಕಿ)ಯನ್ನು ರೂಪಿಸಿದ ಖ್ಯಾತಿಯ ಜೈಮ್ ಜಿಪ್ಪರ್ ಅವರೆ ಇದನ್ನೂ ರೂಪಿಸಿದವರು. ಇವರು ಫಾರ್‌ಮಾಲ್ಡಿಹೈಡ್ ಮತ್ತು ಗಂಧಕದ ಆಮ್ಲಗಳಂತಹ ಅನೇಕ ರಾಸಾಯನಿಕಗಳನ್ನು ಬಳಸಿ ಮೊಲ ಮತ್ತು ಇಲಿಗಳಲ್ಲಿ ಗರ್ಭನಾಳ (fallopion tube)ವನ್ನು ಮುಚ್ಚಲು ಪ್ರಯತ್ನಿಸಿದರು. ಬೇಗದರಲ್ಲೇ, ಕೆಸಲ್ ಮತ್ತು ಸ್ಟೀಫನ್ ಮಮ್‌ಫೋರ್ಡ್ ಅವರುಗಳ ಬೆಂಬಲದಿಂದ ಇದನ್ನು ಮಹಿಳೆಯರ ಮೇಲೆ ಪ್ರಯೋಗಿಸಲಾರಂಭಿಸಿದರು. 1970-79ರ ಅವಧಿಯಲ್ಲೇ ಅವರು 1,109 ಹೆಂಗಸರ ಮೇಲೆ 250-3,000 ಮಿ. ಗ್ರಾಂ ಪ್ರಮಾಣದಲ್ಲಿ Slurry ರೂಪದ ಕ್ವಿನ್‌ಕ್ರೈನ್ ಅನ್ನು ಪ್ರಯೋಗಿಸಿದರು. ಈ ಪ್ರಾರಂಭಿಕ ಪ್ರಯೋಗದಿಂದಾಗಿ ಒಂದು ಕೂಡ ಸಾವು ಸಂಭವಿಸಲಿಲ್ಲವೆಂದು ಜಿಪ್ಪರ್ ಹೇಳಿಕೊಂಡರಾದರೂ 'ವಿಂಟ್ರಾಪ್ ಫಾರ್ಮಸ್ಯುಟಿಕಲ್ಸ್' ಎನ್ನುವ ಔಷಧಿ ತಯಾರಕರು ಈ ಅವಧಿಯಲ್ಲಿ ಮೂರು ಸಾವುಗಳಾಗಿರುವುದನ್ನು ಬಹಿರಂಗಪಡಿಸಿದರು. ಹೀಗಿದ್ದಾಗ್ಯೂ ಮಹಿಳೆಯರ ಮೇಲೆ ಪ್ರಯೋಗ ಮುಂದುವರೆಯಿತು. ಅಂತರರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಂಸ್ಥೆ (ಅಮೇರಿಕಾ)ಯು ಚಿಲಿಯ ಬಡ ಹೆಂಗಸರ ಮೇಲೆ ಇದರ ಮುಂದುವರೆದ ಪ್ರಯೋಗಕ್ಕಾಗಿ ಹೆಚ್ಚು ಸುಧಾರಿತ ವಿಧಾನಗಳನ್ನು ರೂಪಿಸುವಲ್ಲಿ ಜಿಪ್ಪರ್ ಅವರಿಗೆ ನೆರವಾಗಿ ನಿಂತಿತು.

ಚಿಲಿಯಲ್ಲಿ ನಡೆಯುತ್ತಿದ್ದ ಕ್ವಿನಕ್ರೈನ್‌ನ ಪ್ರಯೋಗಾತ್ಮಕ ಬಳಕೆ ರಾಷ್ಟ್ರೀಯ ಗರ್ಭನಿರೋಧಕ ಸಂಶೋಧನೆಯ ಭಾಗವಾಗಿದ್ದಿತು. ಮೂರು ಸಾರ್ವಜನಿಕ ಆಸ್ಪತ್ರೆಯಲ್ಲಿ ಜಿಪ್ಪರ್ ಅವರ ಪರಿಶೀಲನೆಯಡಿಯಲ್ಲಿ ಇದು ನಡೆಯುತ್ತಿದ್ದಿತು. ಆದರೆ 1994ರ ವೇಳೆಗೆ ಆರೋಗ್ಯ ಮಂತ್ರಾಲಯ ಇದರ ಪ್ರಯೋಗಾತ್ಮಕ ಬಳಕೆಯ ವಿಸ್ತರಣೆಗೆ ಅನುಮೋದಿಸಿದಾಗ

ಸಾರ್ವಜನಿಕ ವಿವಾದವೆದ್ದಿತು. ಚಿಲಿಯಲ್ಲಿನ ಆರೋಗ್ಯ ಕಾರ್ಯಕರ್ತೆಯರಿಗೆ ಅಮೇರಿಕಾದಲ್ಲಿರುವ "ಜನಸಂಖ್ಯಾ ಮತ್ತು ಸುರಕ್ಷಣೆ ಸಂಶೋಧನಾ ಕೇಂದ್ರ"ದವರಿಂದ, ಸೆಪ್ಟೆಂಬರ್ ಎಂಟರ (1994) ದಿನಾಂಕದಂದು ತಯಾರಿಸಿದ ಒಂದು ಸುತ್ತೋಲೆ ಬಂದಿತು. ದೇಶದ ಎರಡು ಅತ್ಯಂತ ಜನನಿಬಿಡ ಪ್ರದೇಶಗಳಲ್ಲಿ ಶಸ್ತ್ರ ಚಿಕಿತ್ಸಾ ರೂಪದ ಗರ್ಭ ನಿಯಂತ್ರಣ ವಿಧಾನದ ಜಾಗದಲ್ಲಿ ಕ್ವಿನಕ್ರೈನ್‌ನ ಬಳಕೆ ಪ್ರಾರಂಭಿಸಲು ಚಿಲಿಯ ಆರೋಗ್ಯ ಮಂತ್ರಾಲಯ ತೀರ್ಮಾನ ತೆಗೆದುಕೊಂಡಿರುವ ಬಗ್ಗೆ ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಈ ವಿಚಾರದಲ್ಲಿ ಕೂಲಂಕುಷ ಶೋಧನೆ ನಡೆಸಿದಾಗ, ದಕ್ಷಿಣ ಮತ್ತು ಮಧ್ಯ ಚಿಲಿಗಳಲ್ಲಿ ಸುಮಾರು 1,000 ಹೆಂಗಸರಿಗೆ ಕ್ವಿನಕ್ರೈನ್ ಅಳವಡಿಸಲು ಚಿಲಿಯ ಆರೋಗ್ಯ ಮಂತ್ರಾಲಯ ಜಿಪ್ಪರ್ ಜತೆ ಸಮಾಲೋಚನೆ ನಡೆಸುತ್ತಿರುವುದು ತಿಳಿದು ಬಂತು.

ಚಿಲಿಯಲ್ಲಿ, ಮಹಿಳೆಯರ ಕೃತಕ ಗರ್ಭ ನಿಯಂತ್ರಣದ ಬಗ್ಗೆ ತುಂಬಾ ಕಟ್ಟು ಕಟ್ಟಳೆಗಳಿವೆ. ಶಾಶ್ವತ ಗರ್ಭ ನಿರೋಧಕ ಚಿಕಿತ್ಸೆ ಪಡೆಯಬಯಸುವ ಮಹಿಳೆಗೆ ಮೂವತ್ತು ವರ್ಷಗಳಾಗಿರಬೇಕು, ನಾಲ್ಕು ಬದುಕಿರುವ ಮಕ್ಕಳಿರಬೇಕು ಮತ್ತು ಚಿಕಿತ್ಸೆಗೆ ಗಂಡನ ಸಮ್ಮತಿ ಇರಬೇಕು. ಇಂತಹ ಕಟ್ಟು ಕಟ್ಟಳೆಗಳ ನಡುವೆ ಮಹಿಳೆಯರಿಗೆ ದುಬಾರಿಯಲ್ಲದ, ಖಾಸಗಿಯಾಗಿ ಪಡೆಯಬಹುದಾದ ಕ್ವಿನಕ್ರೈನ್ ತುಂಬಾ ಅನುಕೂಲಕಾರಿಯಾಗಿ ಕಂಡುಬರುವಲ್ಲಿ ಆಶ್ಚರ್ಯವಿಲ್ಲ. ಹೀಗಿರುವಲ್ಲಿ ಮಹಿಳೆಯರಿಗೆ ಕ್ವಿನಕ್ರೈನ್‌ನ ಪ್ರತಿಪಾದಕರು ಇದೊಂದು ಶಾಶ್ವತ ವಿಧಾನ ಮತ್ತು ಅಸಫಲತೆ ಕೇವಲ 3% ಮಾತ್ರ ಎಂಬಿತ್ಯಾದಿಯಷ್ಟೇ ಹೇಳುತ್ತಾರೆಯೇ ವಿನಃ ಇದರ ವಿವಾದಾತ್ಮಕ ಅಂಶಗಳನ್ನು ಕುರಿತು ಹೇಳುವುದಿಲ್ಲ.

ಸ್ಯಾಂಟಿಯಾಗೋದಲ್ಲಿರುವ "ಸಂತಾನ ಸಂಬಂಧೀ ಆರೋಗ್ಯ ಮತ್ತು ಹಕ್ಕುಗಳ ಮುಕ್ತ ವೇದಿಕೆ" ಕ್ವಿನಕ್ರೈನ್‌ನ ಪ್ರಯೋಗಾತ್ಮಕ ಬಳಕೆ ಬಗ್ಗೆ ಮೂರು ಪ್ರಶ್ನೆಗಳನ್ನು ಎತ್ತಿತ್ತು :

(1) ಪರಿಹಾರ ಕಾಣದ ಸುರಕ್ಷತೆಯ ಪ್ರಶ್ನೆ - WHO, USFDA ಮುಂತಾದ ಅಂತರ ರಾಷ್ಟ್ರೀಯ ಸಂಸ್ಥೆಗಳು, ಇದರ ವಿಷಕಾರಕ ಪರಿಣಾಮಗಳ ಕುರಿತ ತೃಪ್ತಿಕರ ಪ್ರಯೋಗಗಳು ಮುಗಿಯುವವರೆಗೂ ಅದರ ಬಳಕೆಯನ್ನು ತಡೆಹಿಡಿಯುವ ಬಗ್ಗೆ ಮಾಡಿದ ಶಿಫಾರಸು ಕೂಡ ಇಲ್ಲಿ ಸೇರುತ್ತದೆ.

(2) ಮಾಹಿತಿ ನೀಡಿ ಒಪ್ಪಿಗೆ ಪಡೆಯುವುದರ ಅವಶ್ಯಕತೆ.

(3) ಮಾಹಿತಿಯಲ್ಲಿ ಪ್ರಾಮಾಣಿಕತೆ ಮತ್ತು ಆಸ್ಪತ್ರೆಯ ನೀತಿ-ನೇಮ ಸಮಿತಿಗಳ ಜತೆಗೆ ಸಂಪರ್ಕ. (ಚಿಲಿಯ ವಿಕೇಂದ್ರೀಕೃತ ಆರೋಗ್ಯ ವ್ಯವಸ್ಥೆಯಲ್ಲಿ, ಸಂಶೋಧನೆಗಳ ನೀತಿ-ನೇಮ ಸಂಬಂಧೀ ತೀರ್ಮಾನಗಳನ್ನು ಕೈಗೊಳ್ಳಲು ಪ್ರತಿ ಆಸ್ಪತ್ರೆಯಲ್ಲಿ ನೀತಿ-ನೇಮ ಸಮಿತಿಗಳಿರುತ್ತವೆ).

ಇವೆಲ್ಲದರ ಪರಿಣಾಮವಾಗಿ, ಚಿಲಿಯ ಆರೋಗ್ಯ ಮಂತ್ರಾಲಯವು 1994ರ ಡಿಸಂಬರ್‌ನಲ್ಲಿ ಕ್ವಿನಕ್ರೈನ್ ಸಂಶೋಧನೆಗೆ ತನ್ನ ಬೆಂಬಲವನ್ನು ಹಿಂತೆಗೆದುಕೊಂಡಿತು. ಅದರ ಬಳಕೆಯನ್ನು ನಿಲ್ಲಿಸಲು ಕರೆ ನೀಡಿತು. ಇದರ ಬಳಕೆ ಮಾಡುತ್ತಿದ್ದ ಮೂರು ಆಸ್ಪತ್ರೆಗಳಿಗೆ, ಅವುಗಳ ಆಂತರಿಕ ನೀತಿ-ನೇಮದ ಮರುಪರಿಶೀಲನೆ ಮಾಡುವಂತೆ ಆದೇಶಿಸಲಾಯಿತು. ಅದೇನೇಯಾದರೂ ಜಿಪ್ಪರ್ ಮತ್ತು ಸಹಚರರು ಮಾತ್ರ ಅಮೇರಿಕಾದ CRPSದಿಂದ ಹಣ ಸಹಾಯ ಪಡೆಯುತ್ತಲೇ ಇರುವುದು ಕಂಡುಬಂದಿದೆ.

**ಪಾಕಿಸ್ತಾನ : ಖಾಸಗಿ ವೈದ್ಯರಿಂದ ಕ್ವಿನಕ್ರೈನ್‌ಗೆ ಒತ್ತಾಸೆ** : ಫೈಸಲಾಬಾದಿನಲ್ಲಿರುವ ತಾಯಿ ಮತ್ತು ಶಿಶು ಕಲ್ಯಾಣ ಸಂಸ್ಥೆಯ ಡಾ. ಅಲ್ತಫ್ ಬಷೀರ್ ಎಂಬ ವೈದ್ಯೆ 1990-91ರ ಅವಧಿಯಲ್ಲಿ ಆಸುಪಾಸಿನ ನಗರ ಮತ್ತು ಗ್ರಾಮೀಣ ಪ್ರದೇಶದ 2,100 ಹೆಂಗಸರಿಗೆ ಕ್ವಿನಕ್ರೈನ್ ಧಾರಣೆ ಮಾಡಿದ್ದಾರೆ. ಆಕೆಯ ಜತೆ ಕೆಲಸ ಮಾಡುವ ಸಾಂಪ್ರದಾಯಿಕ ದಾದಿಯರು ಮತ್ತು ಮಹಿಳಾ ಆರೋಗ್ಯ ಕಾರ್ಯಕರ್ತೆಯರು ಮತ್ತು ವೈದ್ಯರುಗಳು ರಸ್ತೆ ಬದಿಯ ಕ್ಯಾಂಪುಗಳ ಮೂಲಕ ಹೆಂಗಸರನ್ನು ಉತ್ತೇಜಿಸುತ್ತಾರೆ. "ನಮ್ಮ ಅವಿಭಕ್ತ ಕುಟುಂಬಗಳಲ್ಲಿ ಹೆಂಗಸರು ತಾವು ಗರ್ಭ ನಿರೋಧಕ ಬಳಸುತ್ತಿರುವುದು ಕುಟುಂಬದ ಇತರರಿಗೆ ಗೊತ್ತಾಗುವುದನ್ನು ಇಷ್ಟಪಡುವುದಿಲ್ಲ. ಮಹಿಳೆಯರಿಗೆ ದುಬಾರಿಯಲ್ಲದ, ಕಡಿಮೆ ಅಡ್ಡ ಪರಿಣಾಮಗಳ ಮತ್ತು ಮನೆ ಬಾಗಿಲಲ್ಲೇ ದಕ್ಕುವಂತಹ ಸುಲಭ ಗರ್ಭ ನಿರೋಧಕದ ವ್ಯವಸ್ಥೆ ಮಾಡುವಂತೆ ಸರ್ಕಾರದ ಮೇಲೆ ತೀವ್ರ ಒತ್ತಾಯವಿದೆ" ಎನ್ನುವ ಡಾ. ಬಷೀರ್, ಸರ್ಕಾರದ ಸಮ್ಮತಿಯಿಲ್ಲದೇ, ಕಾನೂನು ಕಟ್ಟಳೆಯನ್ನು ತನ್ನ ಕೈಗೇ ತೆಗೆದುಕೊಂಡು ಕ್ವಿನಕ್ರೈನ್‌ನ 'ಸೇವೆ' ಒದಗಿಸುತ್ತಿರುವುದು ಕಂಡುಬಂದಿದೆ.

1993ರಲ್ಲಿ ಫೈಸಲಾಬಾದಿಗೆ ಹೋಗಿ ಡಾ. ಬಷೀರರ ಕಾರ್ಯ ವಿಧಾನವನ್ನು ಪರಿಶೀಲಿಸಿದ ಸ್ವತಂತ್ರ ನರ್ಸ್ ಒಬ್ಬರು ಕ್ವಿನ್‌ಕ್ರೈನ್ ಅಳವಡಿಕೆಯ ಕುರಿತು ಅಲ್ಲಿನ ಸಿಬ್ಬಂದಿಗಳ ಜತೆ ಚರ್ಚಿಸಿದರು. ಹೆಸರು ಹೇಳಲು ಇಚ್ಚಿಸದ ಆಕೆ ತಮ್ಮ

ವರದಿಯನ್ನು ಬಹಿರಂಗ ಪಡಿಸಲು ಒಪ್ಪಿಕೊಂಡರು. ವರದಿ ಹೀಗೆ ಹೇಳುತ್ತದೆ :

"ಬೀದಿ ಬದಿಯ ಕ್ಯಾಂಪುಗಳಲ್ಲಿ ಹೆಂಗಸರನ್ನು ಕ್ವಿನಕ್ರೈನ್ ಅಳವಡಿಕೆಗೆ ಗುರುತಿಸಲಾಗುತ್ತದೆ. ಈ ವಿಧಾನ ಮತ್ತು ಪರಿಣಾಮಗಳ ಸರಿಯಾಗಿ ಯೋಚಿಸಿ ತೀರ್ಮಾನ ತೆಗೆದುಕೊಳ್ಳಲು ಬೇಕಾದ ಮಾಹಿತಿಯಾಗಲೀ, ಸಮಯವಾಗಲೀ ಇವರಿಗೆ ಕೊಡಲಾಗುವುದಿಲ್ಲ. ಕ್ಲಿನಿಕ್ಕಿಗೆ ಬಂದು ಅಳವಡಿಸಿಕೊಳ್ಳುವವರಿಗೆ ಕೊಂಚ ಹೆಚ್ಚು ಮಾಹಿತಿ ದಕ್ಕುವದಾದರೂ, ಪಾಕಿಸ್ತಾನದಲ್ಲಿ ಇದರ ಅಧಿಕೃತ ಬಳಕೆಯನ್ನು ಅನುಮೋದಿಸಲಾಗಿಲ್ಲ ಎಂಬ ಮಾಹಿತಿಯನ್ನು ಮಾತ್ರ ಕೊಡುವುದಿಲ್ಲ. ಸಾಮಾನ್ಯವಾಗಿ ಇದನ್ನು ಅಳವಡಿಸುವವರು, ಅದರ ಮುಂದುವರೆದ ಅಡ್ಡ ಪರಿಣಾಮಗಳ ಬಗ್ಗೆ ವಿವೇಚನೆ ಹೊಂದಿರದ ಸೀಮಿತ ಕುಶಲತೆಯುಳ್ಳ ಅರೆ ವೈದ್ಯ ಆರೋಗ್ಯ ಕಾರ್ಯಕರ್ತರು.

ಅಳವಡಿಸಿದ ನಂತರ ಹೆಂಗಸರಿಗೆ ಯಾವುದೇ ಅವಶ್ಯಕ ಅನುಸರಣಾ ಸೇವೆ ಒದಗಿಸುವುದಿಲ್ಲ. ಏನಾದರೂ ತೊಂದರೆ ಗಳಾದರೆ ತಮ್ಮನ್ನು ಬಂದು ನೋಡುವಂತೆ ಹೆಂಗಸರಿಗೆ ಹೇಳುತ್ತಾರೆ. ಹೆಂಗಸರಿಗೆ ಏನೂ ತೊಂದರೆಗಳಿರದೇ ಹೋಗು ವುದರಿಂದಲೇ ಅವರು ಕ್ಲಿನಿಕ್ಕಿಗೆ ಬರುವುದಿಲ್ಲವೆಂದು ಡಾ. ಬಷೀರ್ ಹೇಳಿಕೊಳ್ಳುತ್ತಾರೆ. ಆದರೆ ಪಾಕಿಸ್ತಾನದಂತ ದೇಶದಲ್ಲಿ, ತೊಂದರೆಗಳಾದಾಗ ಹೆಂಗಸರಿಗೆ ಇದೇ ಕ್ಲಿನಿಕ್ಕಿಗೆ ಸಹಾಯಕ್ಕಾಗಿ ಬರಲು ಕುಟುಂಬ ಅವಕಾಶ ಮಾಡಿಕೊಡುವುದಿಲ್ಲ. ಹೋಗಲೇ ಬೇಕಾದಾಗ ಬೇರೆಲ್ಲಿಗಾದರೂ ಕರೆದೊಯ್ಯುವುದು ಉಂಟು".

ಡಾ. ಬಷೀರರ ಕಾರ್ಯಾಚರಣೆಯನ್ನು ಗಮನಿಸಿದ ಮತ್ತೊಬ್ಬರು ಹೀಗೆ ಹೇಳುತ್ತಾರೆ :

"ಡಾ. ಬಷೀರರು ಮಹಿಳೆಯರ ಗೈನಾಕಾಲಜಿ ಸಂಬಂಧದ ಚರಿತ್ರೆಯನ್ನು ಸರಿಯಾಗಿ ಕೇಳಿಕೊಳ್ಳುವುದಿಲ್ಲ. ಆಕೆ ಕಿಬ್ಬೊಟ್ಟೆ ಪ್ರದೇಶದ ಉರಿವೂತಗಳಿಗಾಗಿ ಪರೀಕ್ಷಿಸುವುದಿಲ್ಲ, ಗರ್ಭಧಾರಣ ಪ್ರದೇಶದಲ್ಲಿರಬಹುದಾದ ಸೋಂಕುಗಳನ್ನು ಪರಿಶೀಲಿಸುವುದಿಲ್ಲ. ಅಲ್ಲದೆ ಮಹಿಳೆಗೆ 5 ವರ್ಷ ಮೇಲ್ಪಟ್ಟ ಮಕ್ಕಳಿದ್ದಾರೆಯೇ, ಇದ್ದರೆ ಎಷ್ಟು ಮಂದಿ ಎಂಬುದನ್ನೂ ಕೇಳುವುದಿಲ್ಲ. ಮುಂದೆ ಆಕಸ್ಮಾತ್ತಾಗಿ ಮಗುವೊಂದು ಸತ್ತರೆ ಮತ್ತೆ ಮಗು ಪಡೆಯಲಾಗದಕ್ಕಾಗಿ ಆಕೆ ಪರಿತಪಿಸಬೇಕಾದ ವಾಸ್ತವ ವೈದ್ಯೆಗೆ ಮುಖ್ಯವಲ್ಲ. ಡಾ. ಬಷೀರರನ್ನು ಎಂದಾದರೂ ಅವರ ಕೆಲಸದ ಯಾವುದೇ ಮುಕ್ತ ಮೌಲ್ಯಮಾಪನ ನಡೆದಿದೆಯೇ ಎಂದು ಕೇಳಿದಾಗ 'ಇಲ್ಲ' ಎಂದಷ್ಟೇ ಹೇಳಿದರು".

ಡಾ. ಬಷೀರರು ಕೊಲೆಯಾಗಿ ಹೋಗಿಬಿಟ್ಟ ನಂತರ ಪಾಕಿಸ್ತಾನದಲ್ಲಿ ಕ್ವಿನಕ್ರೈನ್ ಬಳಕೆ ಇನ್ನೂ ನಡೆಯುತ್ತಿದೆಯೇ ಎಂಬುದು ಸ್ಪಷ್ಟವಿಲ್ಲ. "ಪರಿವಾರ ಸೇವಾ ಸಂತಾನ್" (ಮಾರಿ ಸ್ಟೂಪ್ಸ್, ಇಂಡಿಯಾ) ಸಂಸ್ಥೆಯ ಸಲಹಾಗಾರರಾದ ಡಾ. ಎಸ್. ವಿಶ್ವನಾಥನ್ ಅವರು "ಸಹೇಲಿ" ಜತೆಗಿನ ಸಂದರ್ಶನದಲ್ಲಿ ಪಾಕಿಸ್ತಾನದಲ್ಲಿನ 'ಮಾರಿ ಸ್ಟೂಫ್ಸ್' ಕ್ವಿನಕ್ರೈನ್‌ನ ಬಳಕೆ ಮಾಡುತ್ತಿದೆಯೆಂದು ಹೇಳಿದರು.

ಇರಾನ್ : ಖಾಸಗಿ ವೈದ್ಯರದ್ದೇ ಕಸರತ್ತು - ಡಾ. ಶೀತಾಸಾಹ ಎಂಬ ಟೆಹರಾನಿನ ಖಾಸಗಿ ವೈದ್ಯೆ 1990-94ರ ಅವಧಿಯಲ್ಲಿ 168 ಹೆಂಗಸರಿಗೆ ಕ್ವಿನಕ್ರೈನ್ ಪ್ರಯೋಗಿಸಿದರು. ಜಿಪ್ಪರ್ ಮತ್ತು ಅನುಚರರ ಕೆಲಸವನ್ನಾಧರಿಸಿದ ಅಂತರರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಂಸ್ಥೆಯ ಕ್ರಮವಿಹಿತ ಹೇಳಿಕೆಯನ್ನು ಆಕೆ ಅಧಿಕೃತ ದಾಖಲೆಯಾಗಿ ಬಳಸಿಕೊಂಡರು. ಅದೇನೇಯಾದರೂ, ಇದು ಕ್ರಮಬದ್ಧವಾಗಿರಲಿಲ್ಲ. ಎಪ್ಪತ್ತು ಜನ ಹೆಂಗಸರಿಗೆ ಒಂದು ತಿಂಗಳ ಅಂತರದಲ್ಲಿ ಮೂರು ಡೋಸುಗಳನ್ನೂ ಮತ್ತು 98 ಜನ ಹೆಂಗಸರಿಗೆ ಒಂದು ತಿಂಗಳ ಅಂತರದಲ್ಲಿ ಎರಡು ಡೋಸುಗಳನ್ನೂ ಆಕೆ ಕೊಟ್ಟರು. ಆದ್ದರಿಂದ, ಇಲ್ಲಿಯ ಅಧ್ಯಯನವನ್ನು ಈ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಅಳವಡಿಸಿಕೊಂಡ ಎಲ್ಲ ಹೆಂಗಸರು ಮತ್ತು ಅವರ ಗಂಡಂದಿರಿಗೆ ಕುಟುಂಬ ಯೋಜನಾ ತಜ್ಞರುಗಳ ಮೂಲಕ ಕ್ವಿನಕ್ರೈನ್ ಶಾಶ್ವತ ಸ್ವರೂಪ, ಉಂಟಾಗಬಹುದಾದ ಅಡ್ಡ ಪರಿಣಾಮಗಳು ಇತ್ಯಾದಿಗಳ ಬಗ್ಗೆಯೆಲ್ಲ ಹೇಳಿಸಲಾಯಿತು. ಆದರೆ ಅವರ ಮೇಲೆ ಮಾಡಿರುವುದು ಪ್ರಯೋಗಾತ್ಮಕ ಬಳಕೆ ಎಂಬುದನ್ನು ಮತ್ತು ಕ್ವಿನಕ್ರೈನ್ ಸಂಪೂರ್ಣ ಪರೀಕ್ಷೆಗೊಳಪಟ್ಟು ಪರವಾನೆ ಪಡೆಯದ ಗರ್ಭನಿರೋಧಕ ಎಂಬುದನ್ನು ಮಾತ್ರ ಹೇಳಲಿಲ್ಲ.

*ಅಮೇರಿಕಾದ ಆಹಾರ ಮತ್ತು ಔಷಧ ಅಧಿಕಾರಿಗಳು (FDA) ಅನುಮತಿರಹಿತ ಮತ್ತು ಜೀವೋಪಾಯ ಔಷಧಿಯ ಬಳಕೆಯ ವಿರುದ್ಧ ಎಚ್ಚರಿಕೆ ನೀಡಿದೆ. ಒಂದು ಹೋಂ ಅಬಾರ್ಷನ್ ಕಿಟ್, ಅಂದರೆ ಮಹಿಳೆಯರ ಗರ್ಭ ಹರಣದ ಕಿಟ್. ಎರಡನೆಯ ಕಿಟ್ ಕ್ವಿನಕ್ರೈನ್ ಗುಳಿಗೆ ಹೊಂದಿದೆ. ಈ ಎಚ್ಚರಿಕೆಯಿಂದಾಗಿ ಈ ಎರಡೂ ಕಿಟ್‌ಗಳ ಮಾರಾಟ ನಿಂತಿದೆ.*

ಅಳವಡಿಸಿಕೊಂಡ ಮೊದಲೆರಡು ತಿಂಗಳಲ್ಲಿ ಹೆಚ್ಚು ಕಡಿಮೆ ಎಲ್ಲ ಹೆಂಗಸರೂ ಅಡ್ಡ ಪರಿಣಾಮಗಳಿಂದ ಬಳಲಿದರಾದರೂ, ಅಧ್ಯಯನ ಈ ಅಡ್ಡ ಪರಿಣಾಮಗಳು ತೀರಾ ಸಣ್ಣವು ಮತ್ತು ಇರಾನಿನಲ್ಲಿ ಲಭ್ಯವಿರುವ ಬೇರೆಲ್ಲ ಗರ್ಭ-ನಿರೋಧಕ ವಿಧಾನಗಳಿಗಿಂತ ಕ್ವಿನಕ್ರೈನ್ ತುಂಬಾ ಶ್ರೇಷ್ಠ ವಿಧಾನವಾಗಿ ತೋರುತ್ತದೆ ಎಂಬ ಅಂತಿಮ ಹೇಳಿಕೆ ಕೊಟ್ಟಿತು.

**ಬಾಂಗ್ಲಾದೇಶ : ವೈದ್ಯಕೀಯ ಕಾಲೇಜುಗಳಲ್ಲಿ ಅನಧಿಕೃತ ಪ್ರಯೋಗಾತ್ಮಕ ಬಳಕೆ :**

"ನಾವು ಕ್ವಿನಕ್ರೈನ್ ಅನ್ನು ಗುಪ್ತವಾಗಿ ಬಳಸುತ್ತಿದ್ದೇವೆ. ಅದಕ್ಕೆ ಪ್ರಚಾರ ಮಾಡಿಲ್ಲ. ಅದನ್ನು ಅಳವಡಿಸಿಕೊಂಡವರೇ ಮತ್ತೊಬ್ಬರಿಗೆ ಅದರ ಬಗ್ಗೆ ಹೇಳಿ ನಮ್ಮ ಬಳಿ ಕಳಿಸುತ್ತಾರೆ" ಹೀಗೆ ಹೇಳಿದವರು ಚಿತ್ತಗಾಂಗ್ ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರೂ ಮತ್ತು ಸ್ತ್ರೀರೋಗ ವಿಭಾಗದ ಮುಖ್ಯಸ್ಥರೂ ಆದ ಡಾ. ಸಯ್ಯದ್ ನೂರ್‌ಜಹಾನ್ ಬುಹಿಯಾನ್ ಅವರು. ಅಮೆರಿಕಾದ ಮ್ಯಾಕ್‌ನಿಲ್ ವಿಶ್ವವಿದ್ಯಾಲಯದ ವೈದ್ಯಕೀಯ ವಿಭಾಗದ ಪ್ರೊಫೆಸರ್ ಆದ ಡಾ. ಶ್ರೀ ಮುಲೆ ಅವರೊಂದಿಗಿನ ಸಂದರ್ಶನದಲ್ಲಿ ಅವರು ಮಾತನಾಡುತ್ತಿದ್ದರು (ಫೆಬ್ರವರಿ 15, 1997). 1990-96 ಅವಧಿಯಲ್ಲಿ 513 ಹೆಂಗಸರಿಗೆ ಕ್ವಿನಕ್ರೈನ್ ಧಾರಣೆ ಮಾಡಲಾಗಿದೆ ಇಲ್ಲಿ. ಸುಮಾರು 30% ಹೆಂಗಸರಿಗೆ ಒಂದೆರಡು ವರ್ಷ ಅನುಸರಣಾ ರೂಪದ ಸೇವೆ ಒದಗಿಸಲಾಯಿತು. ನಂತರ ಇದಕ್ಕೆ ಹಣದ ಕೊರತೆ ಉಂಟಾಯಿತೆಂದು ಡಾ. ಬುಹಿಯಾನ್ ಹೇಳುತ್ತಾರೆ. ಅವರ ಪ್ರಕಾರ ಇಲ್ಲಿ 4% ಅಸಫಲತೆಯಾಯಿತು. ಆದರೆ ಇಡೀ ಸನ್ನಿವೇಶದ ಕೂಲಂಕುಷ ವಿಶ್ಲೇಷಣೆ ನಡೆಸಿರುವ ಡಾ. ಮುಲೆಯವರು 14% ಅಸಫಲತೆಯಿದ್ದುದನ್ನು ಬಯಲಿಗೆಳೆದಿದ್ದಾರೆ. ಯಾವುದೇ ಗರ್ಭನಿರೋಧಕ ವಿಧಾನಕ್ಕೆ ಈ ಮಟ್ಟದ ಅಸಫಲತೆ ನಿಷಿದ್ಧವೇ. ಬಾಂಗ್ಲಾದೇಶದಲ್ಲಿ ನಡೆಯುತ್ತಿದ್ದ ಪ್ರಯೋಗಾತ್ಮಕ ಬಳಕೆ ಅನಧಿಕೃತ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಢಾಕಾದ ಪ್ರತಿಷ್ಠಿತ ಸ್ತ್ರೀರೋಗ ತಜ್ಞೆ ಡಾ. ಸಯ್ಯದ್ ಫಿರೋಜ ಬೇಗಂ ಅವರು 20-25 ವರ್ಷಗಳ ಹಿಂದೆ, ಕ್ವಿನ್‌ಕ್ರೈನ್‌ನ slurry ಮತ್ತು ಗುಳಿಗೆಗಳೆರಡನ್ನೂ ಅನೇಕ ಹೆಂಗಸರ ಮೇಲೆ ಪ್ರಯೋಗಿಸಿದ್ದರು. ಅದೇನೇಯಾದರೂ ಕ್ವಿನಕ್ರೈನ್‌ನ ಅಸಫಲತೆಯ ಪ್ರಮಾಣ ತುಂಬಾ ಹೆಚ್ಚಾಗಿರುವುದರಿಂದ ಮತ್ತು ಅಡ್ಡ ಪರಿಣಾಮಗಳು ತೀವ್ರವಾಗಿರುವುದರಿಂದ ಇದೊಂದು ದಕ್ಷ ಗರ್ಭನಿರೋಧಕವಲ್ಲ ಎಂಬ ತೀರ್ಮಾನಕ್ಕೆ ಆಕೆ ಬಂದಿದ್ದಾರೆ. 1994ರ ಈಚೆಗೆ ನಾಲ್ಕು ಬಾರಿ ಈಕೆ ಬಹಿರಂಗವಾಗಿ ಇದರ ಬಳಕೆಯನ್ನು ವಿರೋಧಿಸಿದ್ದಾರೆ. ಡಾ. ಮುಲೇ ಅವರ ಪ್ರಕಾರ, ಬುಹಿಯಾನ್ ಅವರು ಮಾಡುತ್ತಿರುವ ಕ್ವಿನಕ್ರೈನ್ ಬಳಕೆಯನ್ನು ಖಂಡಿಸಲು ಡಾ. ಬೇಗಂ ಅವರು ಹಿಂಜರಿಯುತ್ತಾರೆ, ಕಾರಣ, ಯಾವುದೇ ಪ್ರಯೋಗಾತ್ಮಕ ಬಳಕೆಗಳ ಮೇಲೆ ನೀತಿ-ನೇಮದ ಕಟ್ಟುಪಾಡನ್ನು ತರುವಂತಹ ನಿಯಂತ್ರಣ ಮಂಡಳಿ ಬಾಂಗ್ಲಾದೇಶದಲ್ಲಿಲ್ಲ.

'ಶಮ್ಮಿಲಿತ್ ನಾರೀ ಸಮಾಜ್' ಎಂಬ ಮಹಿಳಾ ಸಂಘಟನೆಗಳ ಸಮನ್ವಯ ಸಮಿತಿ ಮತ್ತು UBINIG ಎಂಬ ಪರ್ಯಾಯ ಯೋಜನ ಸಂಶೋಧನಾ ಗುಂಪು ಬಾಂಗ್ಲಾದೇಶದಲ್ಲಿ ಕ್ವಿನಕ್ರೈನ್ ವಿರುದ್ಧದ ಆಂದೋಲನವನ್ನು ಪ್ರಾರಂಭಿಸಿವೆ. ಇಲ್ಲಿ ಮಹಿಳಾ ಹಕ್ಕುಗಳ ಉಲ್ಲಂಘನೆಯ ಪ್ರಶ್ನೆಯನ್ನು ಅವು ಎತ್ತಿವೆ.

ವಿಯಟ್ನಾಂ : ಗೌರವಾನ್ವಿತ ವೈದ್ಯಕೀಯ ಪತ್ರಿಕೆಯೊಂದರಲ್ಲಿ - ವಿಯಟ್ನಾಂನಲ್ಲಿ 31,781 ಮಹಿಳೆಯರ ಮೇಲೆ ನಡೆದ ಕ್ವಿನಕ್ರೈನ್‌ನ ವಿಧಾನದ ಪರಿಣಾಮವನ್ನು ಕುರಿತು 1993ರಲ್ಲಿ ಪ್ರಕಟವಾದ ಲೇಖನ ಕ್ವಿನಕ್ರೈನ್ ವಿಧಾನಕ್ಕೆ ಒಂದು ನ್ಯಾಯಬದ್ಧತೆಯನ್ನು ತಂದುಕೊಟ್ಟಿತು. 1989ರ ಜನವರಿ 1992ರ ಅಕ್ಟೋಬರ್ ಮಧ್ಯದಲ್ಲಿ ಈ ಬಗ್ಗೆಗಿನ ಅಧ್ಯಯನವನ್ನು ವಿಯಟ್ನಾಂನ ಆರೋಗ್ಯ ಇಲಾಖೆ ನಡೆಸಿತು. ಕೆಸೆಲ್ ಹಾಗೂ ಸ್ಟೀಫನ್ ಮಮ್‌ಫೋರ್ಡ್ ಇವರು ಇದಕ್ಕೆ ತಾಂತ್ರಿಕ ನೆರವು ನೀಡಿದ್ದರು. ನಂತರ ಕ್ವಿನಕ್ರೈನ್ ಗುಳಿಗೆಗಳನ್ನು ತಾಯಿ ಮಕ್ಕಳ ಅಂತರ್‌ರಾಷ್ಟ್ರೀಯ ಸ್ವಿಜರ್‌ಲ್ಯಾಂಡ್ ಸಂಸ್ಥೆಯವರು ಸರಬರಾಜು ಮಾಡಿದರು.

ವಿಯಟ್ನಾಂನ ಲ್ಯಾನ್‌ಸೆಟ್‌ನಲ್ಲಿ ಪ್ರಕಟವಾದ ಲೇಖನಕ್ಕೆ ಹಲವಾರು ಪ್ರತಿಕ್ರಿಯೆಗಳು, ವಿರೋಧಗಳು ಕಂಡುಬಂದವು. ಈ ವಿಧಾನದಲ್ಲಿ ಇರುವ ರಕ್ಷಣೆ ಹಾಗೂ ಸಾಮರ್ಥ್ಯದ ಬಗ್ಗೆ ಹಲವಾರು ಪ್ರಶ್ನೆಗಳು ಕೇಳಿಬಂದವು. ಅಮೇರಿಕಾದಲ್ಲಿನ ವಾಲೆಂಟರಿ ಸರ್ಜಿಕಲ್ ಗರ್ಭ ನಿರೋಧಕ ಸಂಸ್ಥೆ ಮತ್ತು ವಿಶ್ವ ಆರೋಗ್ಯ ಸಂಸ್ಥೆಗಳು ಈ ಪ್ರಶ್ನೆ, ವಾದಗಳ ಹಿನ್ನಲೆಯಲ್ಲಿ ತಮ್ಮ ತಾಂತ್ರಿಕ ಸಮಿತಿಗಳನ್ನು ರಚಿಸಿದರು. ಕ್ವಿನಕ್ರೈನ್ ಅಂಗಾಂಗ ಬೆಳವಣಿಗೆಯಲ್ಲಿ ಉಂಟು ಮಾಡುವ ಏರು-ಪೇರು, ಕ್ಯಾನ್ಸರ್ ತರುವ ಸಾಧ್ಯತೆ ಇತ್ಯಾದಿಗಳನ್ನು ಗಮನಿಸಿಯೇ ಇಲ್ಲ ಎನ್ನುವುದನ್ನು ಗಂಭೀರವಾಗಿ ಪರಿಗಣಿಸಲಾಗಿತ್ತು. ಮುಖ್ಯವಾದುದೆಂದರೆ ಗರ್ಭನಾಳದಲ್ಲಿ ಗರ್ಭ ಬೆಳೆಯುವುದನ್ನು

ಗ್ರಾಮೀಣ ಪ್ರದೇಶಗಳ ಮಹಿಳೆಯರಲ್ಲಿ ಪತ್ತೆ ಹಚ್ಚುವುದು ಕಷ್ಟ ಸಾಧ್ಯ ಎನ್ನುವುದೂ ಕೂಡಾ ಒಂದು ಅಂಶವಾಗಿತ್ತು.

1993ರ ಡಿಸೆಂಬರ್‌ನಲ್ಲಿ ವಿಯಟ್ನಾಂನಲ್ಲಿ ಕ್ವಿನಕ್ರೈನ್ ಬಳಕೆಯನ್ನು ತಕ್ಷಣವೇ ನಿಲ್ಲಿಸಲಾಯಿತು. ವಿಶ್ವ ಆರೋಗ್ಯ ಸಂಸ್ಥೆಯ ಪತ್ರವೇ ಇದಕ್ಕೆ ಕಾರಣವಾಗಿತ್ತು. ಇದರಲ್ಲಿ ಕ್ವಿನಕ್ರೈನ್ ಕ್ಯಾನ್ಸರ್‌ಗೆ ಕಾರಣವಾಗುವ ಬಗ್ಗೆ ಪ್ರಶ್ನೆಗಳನ್ನು ಎತ್ತಲಾಗಿತ್ತು. ವಿಶ್ವ ಆರೋಗ್ಯ ಸಂಸ್ಥೆಯು ತೆಗೆದುಕೊಂಡ ನಿಲುವು ಹಾಗೂ ಆ ಮೂಲಕ ಕ್ವಿನಕ್ರೈನ್‌ನ ರದ್ದತಿಯಿಂದಾಗಿ ಕಿಸೆಲ್ ಹಾಗೂ ಮಮ್‌ಫೋರ್ಡ್ ಇದನ್ನು ಸಮರ್ಥಿಸಿಕೊಳ್ಳತೊಡಗಿದರು. ಅಪಾಯಗಳಿದ್ದರೂ ಇದು ಲಾಭದಾಯಕವಾದದ್ದು ಎಂಬ ವಾದವನ್ನು ಮುಂದಿಡುತ್ತಾ ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ಕ್ವಿನಕ್ರೈನ್ ವಿಧಾನ ಮುಂದುವರಿಸಬೇಕು ಎಂದರು. ಅಂತರ್‌ರಾಷ್ಟ್ರೀಯ ಸ್ವಯಂ ಸೇವಾಸಂಸ್ಥೆಗಳ ಒತ್ತಡದಿಂದಾಗಿಯೂ ಸಹ ವಿಯಟ್ನಾಂ ಸರ್ಕಾರವು ಕ್ವಿನಕ್ರೈನ್ ವಿಧಾನವನ್ನು ನಿಷೇಧಿಸಲು ಯೋಚಿಸಿದೆ.

ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ತು ಕ್ವಿನಕ್ರೈನ್ ಬಗ್ಗೆ ಅಧಿಕೃತವಾಗಿ ಪರೀಕ್ಷಾ ಪ್ರಯೋಗಗಳನ್ನು ನಡೆಸುವ ಮೊದಲೇ ಕಲ್ಕತ್ತದಲ್ಲಿ ಒಬ್ಬ ವೈದ್ಯರು 414 ಜನ ಮಹಿಳೆಯರ ಮೇಲೆ ಈ ಪ್ರಯೋಗ ನಡೆಸಿದ್ದರು. ಇದಕ್ಕಾಗಿ ಇವರು ಯಾವುದೇ ಪರವಾನಗಿಯನ್ನು ಹೊಂದಿರಲಿಲ್ಲ. 1991ರಲ್ಲಿ ಬರೋಡದ ವೈದ್ಯರು ಪ್ರಥಮ ಅಂತರ್‌ರಾಷ್ಟ್ರೀಯ ಸಭೆಯೊಂದರಲ್ಲಿ ಚಾನ್‌ದಂಗ್ ಹಾಗೂ ಇಂಡೋನೇಷಿಯಾದಲ್ಲಿ ಕ್ವಿನಕ್ರೈನ್ ಪ್ರಯೋಗಗಳು ನಡೆದುದರ ಬಗ್ಗೆ ಹಾಗೂ ಅದರ ಪರಿಣಾಮದ ಬಗ್ಗೆ ಹೇಳಿದ್ದರು.' ಇಂದು ICMR ಕ್ವಿನ್‌ಕ್ರೈನ್ ವಿಧಾನವನ್ನು ಉಪಯೋಗಿಸಲು ಅನುಮತಿ ನೀಡದಿದ್ದಾಗಲೂ, ಭಾರತೀಯ ಔಷಧ ನಿಯಂತ್ರಣ ಸಂಸ್ಥೆ ಈ ಬಗ್ಗೆ ಏನೂ ಒಪ್ಪಿಗೆ ನೀಡದಿದ್ದಾಗ್ಯೂ ಸಹ ಕ್ವಿನಕ್ರೈನ್ ಪ್ರಯೋಗಗಳು ನಡೆಯುತ್ತಲೇ ಇವೆ.

ದೀರ್ಘ ಕಾಲದ ಕ್ವಿನಕ್ರೈನ್‌ನ ವಿಷಪೂರಿತ ಅಂಶದ ಶೋಧನೆಯಿಂದ ಹೊರ ಬಂದುದೆಂದರೆ ಇದರಲ್ಲಿ ಅಪಾಯಗಳು ಉಪಯೋಗಕ್ಕಿಂತ ಹೆಚ್ಚಾಗಿರುವುದರಿಂದ ಭಾರತೀಯ ಔಷಧ ನಿಯಂತ್ರಣ ಸಂಸ್ಥೆಯು ಅನುಮತಿ ನೀಡಲು ನಿರಾಕರಿಸಿತು. (ಪತ್ರ ಸಂ. : 12-19/92 - DC DT, 8th ಮೇ 1997 to ಸಹೇಲಿ)

ಹೀಗಿದ್ದಾಗ್ಯೂ ಕ್ವಿನಕ್ರೈನ್ ಬಳಕೆ ಮುಂದುವರಿದಿದೆ. ಖಾಸಗಿ ವೈದ್ಯರು ಹೆಚ್ಚಾಗಿ ಇದನ್ನು ಬಳಸುತ್ತಿದ್ದಾರೆ. ಸ್ವಯಂ ಸೇವಾಸಂಸ್ಥೆಗಳು ಸಾರ್ವಜನಿಕ ಆಸ್ಪತ್ರೆಗಳನ್ನೂ ಸಹ ತೆರೆದಿವೆ. ಕಲ್ಕತ್ತದಲ್ಲಿ ಡಾ. ಮುಲಿಕ್, ಬೆಂಗಳೂರಿನ ಡಾ. ಪ್ರವೀಣ್ ಕಿನಿ, ಸೀತಾ ಬತೀಜ ಹಾಗೂ ರಾಜಗೋಪಾಲ, ದೆಹಲಿಯ ಡಾ. ಜೆ. ಕೆ. ಜೈನ್ ಹಾಗೂ ಲೇಡೀ ಹಾರ್ಡಿಂಜ್ ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ಮತ್ತು ಸಿಬ್ಬಂದಿ ವರ್ಗ ಕ್ವಿನಕ್ರೈನ್ ಪ್ರಯೋಗಗಳನ್ನು ಮಹಿಳೆಯರ ಮೇಲೆ ನಡೆಸುತ್ತಿದ್ದಾರೆ.

ಕಲ್ಕತ್ತಾದ ಡಾ. ಬಿರಲ್ ಮುಲಿಕ್ ಭಾರತದಲ್ಲಿ ಕ್ವಿನಕ್ರೈನ್ ವಿಧಾನವನ್ನು ಬಳಸುತ್ತಿರುವವರಲ್ಲಿ ಅಗ್ರಗಣ್ಯರು. 1979ರ ಜೂನ್ 1984ರಲ್ಲಿಯೇ 414 ಜನ ಹೆಂಗಸರ ಮೇಲೆ ಪ್ರಯೋಗಾತ್ಮಕ ಬಳಕೆ ಮಾಡಲಾಗಿತ್ತು. ಕಲ್ಕತ್ತಾದ ಸ್ವಯಂ ಸೇವಾ ಸಂಸ್ಥೆಯೊಂದರ ಜನರಲ್ ಸೆಕ್ರೆಟರಿ ಆಗಿರುವ ಇವರು ಕ್ವಿನಕ್ರೈನ್ ಗುಳಿಗೆಗಳನ್ನು ಅಮೇರಿಕಾದಿಂದ ಪಡೆದುಕೊಳ್ಳುತ್ತಾರೆ. ತಾವು ಹತ್ತು ಸಾವಿರ ಮಹಿಳೆಯರ ಮೇಲೆ ಈ ವಿಧಾನವನ್ನು ಬಳಸಿದುದಾಗಿ ಇವರು ಹೇಳಿಕೊಂಡಿದ್ದಾರೆ. ಅಷ್ಟಲ್ಲದೇ ಹೋಮಿಯೋಪತಿ ಹಾಗೂ ಆಯುರ್ವೇದಿಕ್ ವೈದ್ಯರಿಗೂ ಸಹ ಇದನ್ನು ಕಳೆದ ಹತ್ತು ವರ್ಷದಲ್ಲಿ ಪರಿಚಯಿಸಿಕೊಟ್ಟಿರುತ್ತಾರೆ. ಭಾರತೀಯ ಗ್ರಾಮೀಣ ಸಂಸ್ಥೆಯ ಮೂಲಕ ನಡೆಸುವ ಈ ಕುಟುಂಬ ಯೋಜನೆ ತರಬೇತಿ ಎರಡು ದಿನ ಪ್ರಾತ್ಯಕ್ಷಿಕ ತರಬೇತಿಯನ್ನು ನೀಡುತ್ತದೆ. ಈ ಬಗ್ಗೆ 7-5-97ರಂದು ಭಾರತೀಯ ಔಷಧ ನಿಯಂತ್ರಣಾಲಯ ಸಂಸ್ಥೆಯೊಡನೆ ಸಂದರ್ಶನ ನಡೆಸಲಾಯಿತು. ಈ ಸಂಸ್ಥೆಯು 1994ರಿಂದ ಔಷಧ ಸರಬರಾಜು ಇಲ್ಲದಿರುವುದರಿಂದ ಡಾ. ಮುಲ್ಲಿಕ್ ಕ್ವಿನಕ್ರೈನ್ ಬಳಕೆ ನಿಲ್ಲಿಸಿರುವುದಾಗಿ ಇದು ಹೇಳಿತು. ಸರಿಯಾಗಿ ತನಿಖೆ ನಡೆಸದೇ ಸಂಸ್ಥೆಯು ಆತನಿಗೆ ವಯಸ್ಸಾಗಿದೆ ಎನ್ನುವ ನೆಪದಲ್ಲಿ

*ವಿಶ್ವ ಆರೋಗ್ಯ ಸಂಸ್ಥೆ ಮತ್ತು ಆಹಾರ ಮತ್ತು ಡ್ರಗ್ ಅಡ್‌ಮಿನಿಸ್ಟ್ರೇಷನ್, ಅಮೇರಿಕಾ ಸಂಸ್ಥೆಗಳು - ಪ್ರಾಣಿಗಳ ಮೇಲೆ ಪ್ರಾಯೋಗಿಕ ಪರೀಕ್ಷೆ ನಡೆದು ಫಲಿತಾಂಶ ಬರುವವರೆಗೂ ಕ್ವಿನಕ್ರೈನನ್ನು ಮಾನವರ ಮೇಲೆ ಬಳಸಕೂಡದು ಎಂದಿದ್ದಾರೆ. ಹೀಗಾದ್ದಾಗ್ಯೂ ಎಲ್‌ಟನ್ ಕಿಸೆಲ್ ಇದಕ್ಕೆ ಸರ್ಕಾರದ ಅನುಮತಿ ಬೇಕಿಲ್ಲ ಎನ್ನುತ್ತಾರೆ. ಇದನ್ನು ಮಲೇರಿಯಾಕ್ಕೆ ಈಗಾಗಲೇ ಬಳಸುವುದರಿಂದ ಅನುಮತಿಯ ಅಗತ್ಯ ಇಲ್ಲ ಎನ್ನುತ್ತಾರೆ.*

ಹಗುರವಾದ ನಿಲುವನ್ನು ತೆಗೆದುಕೊಂಡಿದೆ. ಮುಲ್ಲಿಕ್ ನೀಡಿರುವ ಅಂಕಿ-ಅಂಶಗಳು ವೈಜ್ಞಾನಿಕವಲ್ಲದಿದ್ದಾಗ್ಯೂ ಸಹ I.C.M.R. 1993ರ ಎರಡನೇ ಹಂತದ ಕ್ವಿನಕ್ರೈನ್‌ನ ಪ್ರಯೋಗದಲ್ಲಿ ಇವರ ಸಂಶೋಧನೆಯನ್ನು ಉಲ್ಲೇಖಿಸುವುದರ ಮೂಲಕ ಅದನ್ನು ನ್ಯಾಯಬದ್ಧವಾಗಿಸಿದೆ. 1992ರಲ್ಲಿ ICMR ನಡೆಸಿದ ಕ್ವಿನಕ್ರೈನ್ ಬಗ್ಗೆಗಿನ ಸಭೆಗೆ ಇವರನ್ನು ಕರೆಸಲಾಗಿತ್ತು. ಈ ರೀತಿ ನ್ಯಾಯಯುತವಿರದ ಡಾ. ಮುಲ್ಲಿಕ್‌ರ ಕ್ವಿನಕ್ರೈನ್ ಬಳಕೆಗೆ ನ್ಯಾಯಬದ್ಧತೆ ನೀಡುವ ಹಂತದಲ್ಲಿ ಔಷಧ ನಿಯಂತ್ರಣ ಸಂಸ್ಥೆಯಲ್ಲಿರುವ ಲೋಪದೋಷಗಳು, ಸಂಶೋಧನಾ ರೀತಿಗಳು ಬೆಳಕಿಗೆ ಬರುತ್ತದೆ. I.C.M.R.ನ ಸಹಾಯಕ ನಿರ್ದೇಶಕರಾಗಿರುವ ಡಾ. ಬದ್ರಿ ಸಕ್ಸೇನಾ 2.5.97ರಂದು ಸಹೇಲಿಗೆ ನೀಡಿದ ಸಂದರ್ಶನದಲ್ಲಿ ತಮಗೆ ಡಾ. ಮುಲ್ಲಿಕ್ ಬಗ್ಗೆಯಾಗಲೀ ಅಥವಾ ಇತರ ಸ್ವಯಂ ಸೇವಾ ಸಂಸ್ಥೆಗಳ ಚಟುವಟಿಕೆಗಳ ಬಗ್ಗೆಯಾಗಲೀ ಗೊತ್ತಿಲ್ಲವೆಂದರು.

### ಚಿಪ್ ಟ್ರಸ್ಟ್, ಬೆಂಗಳೂರು - ನ್ಯಾಯಬದ್ಧವಲ್ಲದ ಪ್ರಯೋಗಗಳು

1994ರ ಸೆಪ್ಟೆಂಬರ್‌ನಲ್ಲಿ 'ಸಂಡೆ' ಪತ್ರಿಕೆಯೊಂದರಲ್ಲಿ ಡಾ. ಪ್ರವೀಣ್ ಕಿನಿ, ಡಾ. ಸೀತಾ ಬತೀಜ ಹಾಗೂ ಡಾ. ರಾಜಗೋಪಾಲ - ಬೆಂಗಳೂರಿನಲ್ಲಿ 'ಕ್ವಿ' ವಿಧಾನವನ್ನು ಪ್ರಯೋಗಿಸುತ್ತಿರುವುದಾಗಿ ಪ್ರಕಟಿಸಿದರು. 1994ರ ಜುಲೈನಿಂದ 1996ರ ಜುಲೈನೊಳಗೆ 600 ಮಹಿಳೆಯರ ಮೇಲೆ ಈ ಪ್ರಯೋಗಗಳು ನಡೆದಿರುವುದಾಗಿ ತಿಳಿದು ಬಂತು. ಎರಡು ವರ್ಷದಲ್ಲಿ 25,000 ಮಹಿಳೆಯರ ಮೇಲೆ ಇದನ್ನು ಪ್ರಯೋಗಿಸುವ ಯೋಜನೆ ಇಟ್ಟುಕೊಂಡ ಇವರು Chipನ್ನು (Contraceptive and Health Innovation Project) ಸ್ಥಾಪಿಸಿದ್ದಾರೆ. 25,000 ಮಹಿಳೆಯರ ಮೇಲೆ ಇದನ್ನು ಪ್ರಯೋಗಿಸುವ ಯೋಜನೆ ಯಾವುದೇ ವೈಜ್ಞಾನಿಕ ಅಥವಾ ಸಾಮಾಜಿಕ ಕಾಳಜಿ ಉಳ್ಳದ್ದಲ್ಲ. ಬದಲಾಗಿ 1997ರ ಆಗಸ್ಟ್‌ನಲ್ಲಿ ಕೋಪನ್‌ಹಾಗನ್‌ನಲ್ಲಿ ನಡೆಯುವ ವೈದ್ಯಕೀಯ ಸಮಾರಂಭದಲ್ಲಿ ತಮ್ಮ ಪ್ರಯೋಗಗಳ ಸಾಫಲ್ಯತೆ/ವೈಫಲ್ಯತೆ ಕುರಿತು ಬರೆಯುವುದಾಗಿತ್ತು.

ಚಿಪ್‌ನಲ್ಲಿ ಕರ್ನಾಟಕದ ವಿವಿಧ ಭಾಗಗಳಿಂದ 300-400 ವೈದ್ಯರಿದ್ದಾರೆ. ಈ ವೈದ್ಯರುಗಳಿಗೆ ಔಷಧಿ, ಹತ್ತು ಸ್ಟೆರಿಲೈಜೇಶನ್‌ಗೆ ಆಗುವಷ್ಟು ಉಪಕರಣಗಳು ಹಾಗೂ 'ಕ್ವಿ' ವಿಧಾನದ ಬಗ್ಗೆ ಸಾಹಿತ್ಯವನ್ನು ಕಳುಹಿಸಲಾಗುತ್ತದೆ. ಈ ವೈದ್ಯರು ಎರಡು ದಾಖಲಾತಿ ರೆಜಿಸ್ಟರ್‌ಗಳನ್ನು ಇಟ್ಟುಕೊಂಡಿರುತ್ತಾರೆ. ಒಂದು - ಕ್ವಿನಕ್ರೈನ್ ಬಳಸಿದಾಗ ಉಂಟಾಗುವ ತಕ್ಷಣದ ಪ್ರತಿಕ್ರಿಯೆ ದಾಖಲಿಸಲು ಹಾಗೂ ಇನ್ನೊಂದು ಮುಂದಿನ ಪರಿಣಾಮಗಳನ್ನು ದಾಖಲಿಸಲು ಉಪಯೋಗಿಸಲಾಗುತ್ತದೆ. ಕ್ವಿನಕ್ರೈನ್‌ನ ಗುಳಿಗೆ ಹಾಗೂ ಅಳವಡಿಕೆ ಉಪಕರಣಗಳನ್ನು ಅಮೇರಿಕದಿಂದ 'ಚಿಪ್'ಗೆ ಉಚಿತವಾಗಿ ಸರಬರಾಜು ಮಾಡಲಾಗುತ್ತಿದೆ. ಇಲ್ಲಿಯ ವೈದ್ಯರು ಪ್ರತಿಯೊಬ್ಬರಿಗೂ 100 ರೂಪಾಯಿಗಳನ್ನು ವಿಧಿಸುತ್ತಾರೆ. 'ಕ್ವಿ' ವಿಧಾನದ ಬಗ್ಗೆ ಕೊಡಲಾದ ಸಾಹಿತ್ಯದಲ್ಲಿ 100 ಕ್ವಿನಕ್ರೈನ್ ಅಳವಡಿಕೆಯಲ್ಲಿ ಒಬ್ಬ ಚಿಕ್ಕ ವಯಸ್ಸಿನ ತಾಯಿ ಸಾಯುವುದನ್ನೂ ಮೂರು ಮಕ್ಕಳು ಅನಾಥರಾಗುವುದನ್ನೂ ತಪ್ಪಿಸಲಾಗುತ್ತದೆ ಎಂದು ಹೇಳಲಾಗಿದೆ. ಅಧಿಕೃತ ಒಪ್ಪಿಗೆಯಿಲ್ಲದೇ ಈ ವಿಧಾನವನ್ನು ಬಳಸುವ ಬಗ್ಗೆ ಕೂಡಾ ಸಮರ್ಥಿಸಿಕೊಳ್ಳಲಾಗುತ್ತದೆ. ಸರ್ಕಾರದ ನಿಧಾನಗತಿಯಿಂದಾಗಿ ಈ ಕಾರ್ಯಕ್ರಮ ನಿಧಾನವಾಗಿ ಒಪ್ಪಿಗೆ ಪಡೆಯಬಹುದು. ಆದರೆ ಅಲ್ಲಿಯವರೆಗೆ ಕಾದು ಇನ್ನೂ ಹಲವು ಚಿಕ್ಕ ವಯಸ್ಸಿನ ತಾಯಂದಿರು ಸಾಯುವಂತೆ ಮಾಡಬೇಕೆ? ಎಂದು ಈ ಬಗ್ಗೆಗಿನ ಸಾಹಿತ್ಯ ಹೇಳುತ್ತದೆ.

### ಡಾ. ಜೈನ್ ಕ್ಲಿನಿಕ್ - ಪ್ರೈವೇಟ್ ಲಿಮಿಟೆಡ್

ಈ ಆರು ವರ್ಷಗಳಲ್ಲಿ 'ಕ್ವಿ' ವಿಧಾನವನ್ನು ಹೆಚ್ಚು ಪ್ರಚಾರ ಮಾಡುತ್ತಿರುವವರಲ್ಲಿ ದೆಹಲಿಯ ಡಾ. ಜೈನ್ ಮುಖ್ಯರಾದವರು. ಜನರಲ್ ಸರ್ಜನ್ ಹಾಗೂ ಜೈನ್ ಮೆಡಿಕಲ್ ಸೆಂಟರ್‌ನ ಹಾಗೂ ಜೈನ್ ಕ್ಲಿನಿಕ್ ಪ್ರೈವೇಟ್ ಲಿಮಿಟೆಡ್‌ನ ಮಾಲೀಕರಾಗಿರುವ ಇವರು ವೈದ್ಯಕೀಯ ವಲಯದಲ್ಲಿ ಹೆಚ್ಚು ಪ್ರಭಾವಶಾಲಿಗಳು ಹಾಗೂ ಹೆಸರಾದವರು. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ವೈದ್ಯಕೀಯ ಸಂಸ್ಥೆಗಳಲ್ಲಿ ಪ್ರಭಾವಯುತ ಸ್ಥಾನ ಹೊಂದಿರುವ ಇವರು ಬಿ.ಜೆ.ಪಿ. ಸರ್ಕಾರದಲ್ಲಿ ಎಂ.ಪಿ.ಯಾಗಿದ್ದವರು. ಜೈನ್ ಟಿ.ವಿ.ಯ ಮಾಲೀಕರೂ ಕೂಡಾ. ತಮ್ಮ ಈ ಪ್ರಭಾವಯುತ ಸ್ಥಾನದಿಂದಾಗಿ ವಿವಾದಾತ್ಮಕ 'ಕ್ವಿ' ವಿಧಾನವನ್ನು ಪ್ರಚಾರ ಮಾಡಿಯೂ ಕೂಡಾ ಸುರಕ್ಷಿತವಾಗಿ ಉಳಿಯಬಲ್ಲವರಾಗಿದ್ದಾರೆ. 'ಸಹೇಲಿ'ಗೆ ನೀಡಿದ ಸಂದರ್ಶನದಲ್ಲಿ ಇವರು 'ಕ್ವಿ' ವಿಧಾನವನ್ನು ಟಾನ್‌ತಂಗ್, ಇಂಡೋನೇಷಿಯ (15, 1991)ದ ಅಂತರರಾಷ್ಟ್ರೀಯ ಸಂಕಿರಣದಲ್ಲಿ ತಿಳಿದುಕೊಂಡುದಾಗಿ ಹೇಳುತ್ತಾರೆ. ವಾಪಸ್ಸು ಬಂದು ಬೇರೆ ಬೇರೆ ಕಡೆ ಈ ವಿಧಾನವನ್ನು ಪ್ರಚಾರ ಮಾಡಿ ಬಳಸಲು ವಿಫಲರಾಗಿ ನಿರಾಶರಾದಾಗ - ಈ ಬಗ್ಗೆ ಒಂದು ಚಳುವಳಿ

ಹುಟ್ಟು ಹಾಕುವುದಕ್ಕಾಗಿ ಕ್ವಿನಕ್ರೈನ್‌ನ್ನು ತಮ್ಮ ಕೈಯಲ್ಲಿ ತೆಗೆದುಕೊಂಡುದಾಗಿ ಹೇಳುತ್ತಾರೆ. ದೆಹಲಿಯ ಮಹಿಳಾ ಗುಂಪುಗಳು ಇವರ ಕ್ಲಿನಿಕ್ ಹತ್ತಿರ (2 ಮೇ, 1997) 'ಕ್ವಿ' ವಿಧಾನದ ಬಳಕೆಯ ವಿರುದ್ಧ ಧರಣಿ ನಡೆಸಿದಾಗ ಇವರು ಭಾರತ ಸರ್ಕಾರ ಅಥವಾ ವಿಶ್ವ ಆರೋಗ್ಯ ಸಂಸ್ಥೆ ಕುಟುಂಬ ಯೋಜನೆಯ ಬಗ್ಗೆ ಯಾವುದೇ ಸುಲಭೋಪಾಯ ಕಂಡು ಹಿಡಿಯದೇ ಇರುವುದರಿಂದ ತಾವು ಹೆಂಗಸರ ಒಳಿತಿಗೋಸ್ಕರ ಈ ಚಳುವಳಿ ಹಮ್ಮಿಕೊಂಡು ರಾಷ್ಟ್ರೀಯ ಸೇವೆ ಮಾಡುತ್ತಿರುವುದಾಗಿ ಹೇಳಿಕೆ ಇತ್ತರು. ಆದರೆ ಒಬ್ಬ ಸರ್ಜನ್ ಜನಸಂಖ್ಯಾ ನಿಯಂತ್ರಣ ಚಳುವಳಿಯಲ್ಲಿ ತನ್ನನ್ನು ಹೇಗೆ ನೋಡಿಕೊಳ್ಳುತ್ತಾನೆ ಎಂಬುದೇ ಪ್ರಶ್ನೆಯಾಗುತ್ತದೆ. ಸಹೇಲಿ ಯವರು ಈ ಔಷಧಿ ಬಳಕೆಗಿರುವ ಅನುಮತಿಯ ಬಗ್ಗೆ ಕೇಳಿದಾಗ ಪರವಾನಗಿ ಎಂದರೇನು? ಎಂ.ಬಿ.ಬಿ.ಎಸ್, ಎಂ.ಡಿ. ಡಿಗ್ರಿಗಳು ಪರವಾನಗಿಗಳಲ್ಲವೇ ಎನ್ನುತ್ತಾರೆ: ಡಾಕ್ಟರ್ ಜೈನ್ ಪ್ರಕಾರ ವೈದ್ಯಕೀಯ ಡಿಗ್ರಿಗಳು ಅವರವರು ಇಷ್ಟಪಟ್ಟ ಹಾಗೆ ವರ್ತಿಸಲು ಇರುವ ಪರವಾನಗಿಗಳೆಂದು ಭಾವಿಸಬೇಕಾಗಿದೆ.

ಡಾ. ಜೈನ್ 'ಕ್ವಿ' ವಿಧಾನವನ್ನು ಬಳಸಲು ಯಾವುದೇ ವೈದ್ಯಕೀಯ ಅಥವಾ ವೈಜ್ಞಾನಿಕ ಕಾರಣಗಳನ್ನು ನೀಡುವುದಿಲ್ಲ. ಬದಲಾಗಿ ವಿಯಟ್ನಾಂನಲ್ಲಿ 31,781 ಜನ ಮಹಿಳೆಯರ ಮೇಲೆ ಇದನ್ನು ಬಳಸಿಲ್ಲವೇ ಎನ್ನುತ್ತಾರೆ. ಇದು ರಕ್ಷಣೆ ಹಾಗೂ 'ಕ್ವಿ' ವಿಧಾನದ ಸಾಮರ್ಥ್ಯದ ಬಗ್ಗೆ ಸೂಚಿಸುವುದಿಲ್ಲವೇ ಎನ್ನುತ್ತಾರೆ. ಈ ರೀತಿಯ ಕ್ಲಿನಿಕಲ್ ಪ್ರಯೋಗಗಳು ಮೊದಲು ಪ್ರಾಣಿಗಳ ಮೇಲೆ ಪ್ರಯೋಗಾಲಯದಲ್ಲಿ ನಡೆದಿರಬೇಕು. ಅಲ್ಪಾವಧಿ ಹಾಗೂ ದೀರ್ಘಾವಧಿ ಪ್ರಭಾವಗಳು ಗೊತ್ತಿರಬೇಕು. ಆದಾಗ್ಯೂ ಸಹೇಲಿಗೆ ನೀಡಿದ ತಮ್ಮ ಸಂದರ್ಶನದಲ್ಲಿ ಡಾ. ಜೈನ್, 'ಕ್ಲಿನಿಕಲ್ ಪ್ರಯೋಗಗಳೆಂದರೇನು? ಇದನ್ನು ಇಡಿಯ ಜಗತ್ತಿನಲ್ಲಿ ಬಳಸಲಾಗುತ್ತಿದೆ' ಎನ್ನುತ್ತಾರೆ. ಆದರೆ ಇವರು ಸರಬರಾಜು ಮಾಡುತ್ತಿರುವ ಪ್ಯಾಕೇಜ್‌ಗಳ ಮೇಲೆಯೂ, 'ಕ್ಲಿನಿಕಲ್ ಪ್ರಯೋಗಕ್ಕಾಗಿ ಡಾ. ಜೈನ್ ಕ್ಲಿನಿಕ್ ಪ್ರೈವೇಟ್ ಲಿಮಿಟೆಡ್‌ನಿಂದ ಸರಬರಾಜು' ಎಂದೇ ಬರೆದಿರಲಾಗುತ್ತದೆ. ಡಾ. ಜೈನ್ ಬಗ್ಗೆಯಾಗಲೀ ಅಥವಾ ಇದನ್ನು ಪ್ರಚಾರ ಮಾಡುತ್ತಿರುವವರ ಇತರರ ಬಗ್ಗೆಯಾಗಲೀ ಔಷಧ ನಿಯಂತ್ರಣಾಧಿಕಾರಿಗಲು ಯಾವುದೇ ಕ್ರಮ ತೆಗೆದು ಕೊಂಡಿರುವುದಿಲ್ಲ.

**ಕ್ವಿನಕ್ರೈನ್ ಬಗ್ಗೆ ಭಾರತದ ಕಾನೂನು ಸ್ಥಿತಿ**

ಕ್ವಿನಕ್ರೈನ್ ಬಗ್ಗೆ - ಅದರ ಪ್ರಯೋಗದ ಬಗ್ಗೆ ವೈರುಧ್ಯಮಯವಾದ ಹೇಳಿಕೆಗಳು ಸಾರ್ವಜನಿಕವಾಗಿ ವ್ಯಕ್ತವಾದೊಡನೆಯೇ ಈ ಪ್ರಯೋಗದ ಬಳಕೆಯಲ್ಲಿ ತೊಡಗಿರುವ ಎಲ್ಲಾ ವೈದ್ಯರೂ ಹಾಗೂ ಇತರರೂ ಕೂಡಾ ತಾವು ರಾಷ್ಟ್ರದ ಒಳಿತಿಗಾಗಿ ದುಡಿಯುತ್ತಿದ್ದೇವೆಂಬ ಹಾಗೂ ಪ್ರಾಮಾಣಿಕ, ದಕ್ಷರೆಂಬ ವ್ಯಕ್ತಿತ್ವವನ್ನು ತೋರಿಸುತ್ತಾರೆ. ಕಾನೂನು ಬದ್ಧವಾಗಿರದಿದ್ದರೂ ಕ್ವಿನಕ್ರೈನ್ ಕಾನೂನು ಬದ್ಧವಾದದ್ದು ಎಂದು ಕೆಳಕಂಡ ರೀತಿಯಲ್ಲಿ ಹೇಳಲಾಗುತ್ತಿದೆ. ಕ್ವಿನಕ್ರೈನ್ ಪ್ರತಿಪಾದಕರ ಹೇಳಿಕೆಗಳು ಹಾಗೂ ವಾಸ್ತವ ಪರಿಸ್ಥಿತಿಯನ್ನು ಕೆಳಗೆ ಹೇಳಲಾಗಿದೆ.

ಕ್ವಿನಕ್ರೈನ್ ಒಂದು ಹಳೆಯ ಹಾಗೂ ಒಪ್ಪಿತಗೊಂಡಿರುವ ಔಷಧಿ. ಇದನ್ನು ಕೆಮಿಕಲ್ ಉದರಹರಣಕ್ಕೆ ಬಳಸಲು ಯಾವುದೇ ಹೊಸ ಅನುಮತಿ ಬೇಕಿಲ್ಲ.

ವಾಸ್ತವ ಸ್ಥಿತಿ : ಔಷಧ ಮತ್ತು ಶೃಂಗಾರ ಸಾಧನಗಳ ಕಾನೂನಿನ ಭಾಗ X-A ಕ್ಲಿನಿಕಲ್ ಪ್ರಯೋಗಕ್ಕಾಗಲೀ ಅಥವಾ ಮಾರಾಟಕ್ಕಾಗಲೀ ಹೊಸ ಔಷಧಿಯ ಆಮದು ಮತ್ತು ತಯಾರಿಕೆಯ ಬಗ್ಗೆ ಹೀಗೆ ಹೇಳುತ್ತದೆ. ರೂಲ್-122E ಪ್ಕಾರಾ ಹೊಸ ಔಷಧಿಗಳ ವ್ಯಾಖ್ಯಾನ ಹೊಂದಿದೆ. ರೂಲ್ 21ರಲ್ಲಿ ಕೆಲವು ಕಾರಣಕ್ಕಾಗಿ ಅಧಿಕಾರಿಗಳಿಂದ ಒಪ್ಪಿಗೆ ಪಡೆದ ಔಷಧಿ ಈಗ ಹೊಸ ಮಾದರಿಯಿಂದ - ಅಂದರೆ ಡೋಸೇಜ್; ಅದರ ಪ್ರಮಾಣ ಇತ್ಯಾದಿ ಮಾರಾಟ ಮಾಡಲ್ಪಡುತ್ತದೆ. ಭಾರತೀಯ ಔಷಧಿ ನಿಯಂತ್ರಣಾಧಿಕಾರಿಗಳು ಸಹೇಲಿಗೆ ನೀಡಿದ ಸಂದರ್ಶನದಲ್ಲಿ ಈ ಬಗ್ಗೆ ವಿವರವಾಗಿಯೇ ಹೇಳಿದ್ದಾರೆ. ಕ್ವಿನಕ್ರೈನ್ ಅಥವಾ ಮೆಪಾಕ್ರೈನ್ ಎಂಬ ಹೆಸರಿನಲ್ಲಿ ಭಾರತದಲ್ಲಿ ಮಾರಾಟವಾಗುವ ಈ ಔಷಧಿ, ಗುಳಿಗೆಯ ರೀತಿಯಲ್ಲಿ ಮಲೇರಿಯ, ಜಿಯಾರ್‌ಡಿಯಾಸಿಸ್ ಮತ್ತು ಎಮ್ಮಿಯೋಬಿಯಾಸಿಸ್‌ಗೆ ಬಾಯಿ ಮೂಲಕ ಸೇವಿಸುವುದಕ್ಕೆ ಮಾತ್ರ ಒಪ್ಪಿಗೆ ಪಡೆದಿದೆ. ಆದರೆ ಉದರಹರಣ ಚಿಕಿತ್ಸೆಗೆ

*ಜವಹರಲಾಲ್ ವಿಶ್ವವಿದ್ಯಾನಿಲಯದ ಸೆಂಟರ್ ಫಾರ್ ಸೋಷಿಯಲ್ ಮೆಡಿಕಲ್ ಆಂಡ್ ಕಮ್ಯುನಿಟಿ ಹೆಲ್ತ್ ಹಾಗೂ ಆಲ್ ಇಂಡಿಯ ಡೆಮಾಕ್ರಟಿಕ್ ವಿಮೆನ್ಸ್ ಸಂಸ್ಥೆ ಪಬ್ಲಿಕ್ ಇಂಟರೆಸ್ಟ್ ಸೂಟ್ ಮೂಲಕ ಭಾರತ ಸರ್ಕಾರವನ್ನು ಹಾಗೂ ಇಂಡಿಯನ್ ಕೌನ್ಸಿಲ್ ಫಾರ್ ಮೆಡಿಕಲ್ ರೀಸರ್ಚನ್ನು ಕ್ವಿನಕ್ರೈನ್ ಪ್ರಯೋಗ ನಿಲ್ಲಿಸಲು ಒತ್ತಾಯಿಸಿದ್ದಾರೆ.*

ಕ್ವಿನಕ್ರೈನ್ ಗುಳಿಗೆಯನ್ನು ಗರ್ಭಕೋಶದಲ್ಲಿ ಅಳವಡಿಸಲಾಗುತ್ತದೆ. ಇದು ಹಳೆಯ ಔಷಧಿಯ ಹೊಸ ಮಾದರಿ. ಹಾಗಾಗಿ ಇದರ ಹೊಸದಾದ ಬಳಕೆಗೆ ಮತ್ತೆ ಒಪ್ಪಿಗೆ ಪಡೆಯಬೇಕಾಗುತ್ತದೆ. ಆದ್ದರಿಂದ ಇದನ್ನು ಹೊಸ ಔಷಧಿಯೆಂದು ಪರಿಗಣಿಸಲಾಗಿದ್ದೆ, ಇದಕ್ಕೆ ಹೊಸ ಒಪ್ಪಿಗೆ ಹಾಗೂ ಅನುಮತಿ ಅಗತ್ಯವಾಗಿದೆ.

**(2) ಇಡಿಯ ಪ್ರಪಂಚದಲ್ಲಿಯೇ ಬಳಕೆಯಾಗುತ್ತಿರುವ ಕ್ವಿನಕ್ರೈನ್‌ಗೆ ಮತ್ತೆ ಪ್ರಯೋಗಗಳು ಬೇಕಿಲ್ಲ.**

ಡಿ. ಸಿ. ಆ್ಯಕ್ಟ್ (Drugs and Cosmetic Act) ಹೊಸ ಔಷಧಿಯ ಆಮದು ಅಥವಾ ತಯಾರಿಕೆಯ ಅವಶ್ಯಕತೆ ಹಾಗೂ ಮಾರ್ಗದರ್ಶಿ. ಈ ವಿಭಾಗ ಕ್ಲಿನಿಕಲ್ ಪ್ರಯೋಗಗಳ ಬಗ್ಗೆ ಹೇಳುತ್ತದೆ. ಪ್ಯಾರಾ 1.1 ಪ್ರಯೋಗಗಳ ಸ್ಥಿತಿಯ ಬಗ್ಗೆ ಹೇಳುತ್ತದೆ. ಇತರ ದೇಶಗಳಲ್ಲಿ ಔಷಧಿಯ ಸ್ಥಾನಮಾನಕ್ಕೆ ಅವಲಂಬಿತವಾಗಿ ಹೊಸ ಔಷಧಿಯನ್ನು ಈ ದೇಶದಲ್ಲಿ ಒಪ್ಪಿತಗೊಳಿಸುವ ಮೊದಲು ಕ್ಲಿನಿಕಲ್ ಪ್ರಯೋಗಗಳು ನಡೆಯಬೇಕಾಗುತ್ತದೆ. ಒಂದು ಪಕ್ಷ ಈ ಔಷಧಿ ಈಗಾಗಲೇ ಒಪ್ಪಿತಗೊಂಡಿದ್ದರೆ, ಮಾರಾಟ ಮಾಡಲ್ಪಟ್ಟಿದ್ದರೆ ಮೂರನೇ ಹಂತದ ಪ್ರಯೋಗಗಳು ಅಗತ್ಯವಾಗುತ್ತವೆ. (Item - 7 of Appendix) ಇತರೇ ದೇಶಗಳ ಪ್ರಯೋಗಗಳ ಹಂತಗಳಿಗಿಂತ ಒಂದು ಹಂತ ಮೊದಲೇ ಮಾಡಲು ಅನುಮತಿ ನೀಡಲಾಗುತ್ತದೆ.

ಇದಕ್ಕೆ ವಿರುದ್ಧವಾಗಿ ಕ್ವಿನಕ್ರೈನ್‌ನ ಪ್ರತಿಪಾದಕರು ಇಂದು ಇಡಿಯ ಪ್ರಪಂಚದಲ್ಲಿ ಕ್ವಿನಕ್ರೈನ್ ವಿಧಾನ ಒಪ್ಪಿತಗೊಂಡಿದೆ ಎಂದು ಹೇಳುತ್ತಾರೆ. [illegible]93ರಲ್ಲಿ ಭಾರತ ಔಷಧ ನಿಯಂತ್ರಣಾಲಯ ಸಂಸ್ಥೆಯು Phase-II-A ಪ್ರಯೋಗವನ್ನು ಪ್ರಾರಂಭಿಸಿತು. ಸಹೇಲಿಗೆ ನೀಡಿದ ಸಂದರ್ಶನದಲ್ಲಿ I.C.M.R - ಇಡಿಯ ಪ್ರಪಂಚದಲ್ಲಿ ಕ್ವಿನಕ್ರೈನ್ ಸಾಮರ್ಥ್ಯದ ಬಗ್ಗೆ ಹಾಗೂ ವೈಫಲ್ಯತೆಯ ಬಗ್ಗೆ ಸಾಬೀತಾಗಿರುವುದರಿಂದ ಕ್ವಿನಕ್ರೈನ್ ಪ್ರಯೋಗವನ್ನು ತೆಗೆದು ಹಾಕಿರುವುದಾಗಿ ಹೇಳುತ್ತದೆ. ಕ್ವಿನಕ್ರೈನ್‌ನ ಕ್ಲಿನಿಕಲ್ ಪ್ರಯೋಗದ ಎರಡನೇ ಹಂತ ಇನ್ನು ನಡೆಯಬೇಕಿದೆ. ಇದು ಒಪ್ಪಿತವಾಗುವ ಮೊದಲು ಇದರ ಬಳಕೆಯ ಬಗ್ಗೆ ತಿಳುವಳಿಕೆ ಬೇಕು ಎನ್ನುತ್ತಾರೆ.

**(3) ಭಾರತದಲ್ಲಿ ಕ್ವಿನಕ್ರೈನ್‌ನ ಕ್ಲಿನಿಕಲ್ ಪ್ರಯೋಗಗಳನ್ನು ಮಾಡುವುದಕ್ಕೆ ಯಾವುದೇ ರೀತಿಯ ಒಪ್ಪಿಗೆ / ಅನುಮತಿಗಳು ಬೇಕಿಲ್ಲ :**

ಪ್ಯಾರ 1.2 ಶ್ಯೆಡ್ಯೂಲ್ ವೈ. ನ. ಡಿ. ಸಿ. ಆಕ್ಟ್ - ಪ್ರಯೋಗಗಳಿಗಾಗಿ ಅನುಮತಿಯನ್ನು ಕುರಿತು ಹೇಳುತ್ತದೆ. ಹೊಸ ಔಷಧಿಯನ್ನು ಕ್ಲಿನಿಕಲ್ ಪ್ರಯೋಗಕ್ಕಾಗಿ ಉಪಯೋಗಿಸಲು 12ನೇ ಅರ್ಜಿಯಲ್ಲಿ ಸಲ್ಲಿಸಿರಬೇಕು. ಈ ಅರ್ಜಿ ಉಪಯೋಗಿಸಿಕೊಳ್ಳುವ ಅಥವಾ ಔಷಧ ತಯಾರಿಕೆಯ ಪರೀಕ್ಷೆಯ ಅನುಮತಿಗಾಗಿರುತ್ತದೆ. ಹೊಸ ಔಷಧಿಯ ಕ್ಲಿನಿಕಲ್ ಪ್ರಯೋಗ ನಡೆಸಲು ಪರೀಕ್ಷಾ ಪರವಾನಗಿಯೊಂದಿಗೆ ಅನುಮತಿ ನೀಡಲಾಗುತ್ತದೆ. ಆದರೆ ಕ್ವಿನಕ್ರೈನ್ ಬಗ್ಗೆ ಪ್ರಯೋಗ ನಡೆಸುತ್ತಿರುವ ಯಾವುದೇ ಸಂಘಟನೆ, ಸರ್ಕಾರಿ ಅಥವಾ ಸರ್ಕಾರೇತರ ಸಂಸ್ಥೆ ಅಥವಾ ಯಾವುದೇ ವೈದ್ಯಾಧಿಕಾರಿ ತಾವು ಯಾವುದೇ ಕಾನೂನಿಗೆ ಬದ್ಧರಾಗಬೇಕಿಲ್ಲ ಎಂದು ಎಣಿಸುತ್ತಾರೆ. ಭಾರತದ ಔಷಧ ನಿಯಂತ್ರಣಾಧಿಕಾರಿ ಸಂಸ್ಥೆಯು ಕ್ವಿನಕ್ರೈನ್ ಬಳಕೆಗೆ ಯಾವುದೇ ಅನುಮತಿ ನೀಡಿಲ್ಲ ಎಂಬುದನ್ನು ಸ್ಪಷ್ಟಪಡಿಸಿದೆ. ಹೀಗಿರುವಾಗ ಕಾನೂನಿಗೆ ಬದ್ಧವಾಗಿರದೇ ಕ್ವಿನಕ್ರೈನ್ ಬಳಸುತ್ತಿರುವ ಎಲ್ಲಾ ಸಂಘಟನೆ, ಸಂಸ್ಥೆಗಳನ್ನೂ ಹಾಗೂ ವ್ಯಕ್ತಿಗಳನ್ನು ಶಿಕ್ಷೆಗೆ ಗುರಿಪಡಿಸಬೇಕಿದೆ.

**(4) ಕ್ವಿನಕ್ರೈನ್ ಗರ್ಭ ಹರಣಕ್ಕೆ ಒಪ್ಪಿತವಾದ ಔಷಧಿಯಾಗಿರದಿದ್ದರೂ, ಒಪ್ಪಿಗೆ ರಹಿತವಾದದ್ದೂ ಅಲ್ಲ. ಆದ್ದರಿಂದ ಇದರ ಆಮದಿಗಾಗಲೀ ಅಥವಾ ತಯಾರಿಕೆಗಾಗಲೀ ಅಥವಾ ಭಾರತದಲ್ಲಿ ಬಳಸುವುದನ್ನಾಗಲೀ ನಿಷೇಧಿಸಲಾಗಿಲ್ಲ.**

ಇದು ಹಳೆಯ ಔಷಧಿ, ಆದ್ದರಿಂದ ಬಳಸಬಹುದು ಎನ್ನುವುದೇ ಕ್ವಿನಕ್ರೈನ್ ಪ್ರತಿಪಾದಕರ ವಾದ. ಸಹೇಲಿಯ ಸಂದರ್ಶನದಲ್ಲಿ D.C.I. ಹೇಳಿದುದೆಂದರೆ (1) ಒಪ್ಪಿತವಾದ ಶಿಷ್ಟಾಚಾರದ ಆಧಾರದ ಮೇಲೆ ಕ್ಲಿನಿಕಲ್ಸ್ ಪ್ರಯೋಗಕ್ಕೆ ಕೊಡುವ ಒಪ್ಪಿಗೆ. (2) ಒಪ್ಪಿಗೆಯಿತ್ತ ಹಾಗೂ ಆಯ್ಕೆಗೊಂಡ ರೋಗಿಗಳ ಮೇಲೆ ಔಷಧವನ್ನು ಬಳಸಲು ಕಡಿಮೆ ಪ್ರಮಾಣದ ವೈದ್ಯರು/ ಸಂಸ್ಥೆಗಳಿಗೆ ಪರೀಕ್ಷಾ ಪ್ರಯೋಗಕ್ಕೆ ಪಡೆಯುವ ಒಪ್ಪಿಗೆ, (3) ವ್ಯಕ್ತಿಗಳಿಗೆ ಔಷಧವನ್ನು ಬಳಸಲು ನೇರವಾಗಿ ನೀಡಿರುವ

*ಕ್ವಿನಕ್ರೈನ್ ಗುಳಿಗೆ ತಯಾರಿಸುವ 'ಸಿ ಫಾರ್ಮ್' ಎಂಬ ಸ್ವಿಸ್ ಕಂಪನಿಯು ಔಷಧಿಗಳ ವಿಷಪೂರಿಕತೆಯನ್ನು ಕುರಿತ ವಿಶ್ವ ಆರೋಗ್ಯ ಸಂಸ್ಥೆಯ ವಿಷಪೂರಿತ ಬಗ್ಗೆಗಿನ ಪ್ಯಾನಲ್ ಕ್ವಿನಕ್ರೈನ್ ಸುರಕ್ಷಿತ ವಿಧಾನವಲ್ಲ ಎಂದು ಹೇಳಿರುವುದರ ಬಗ್ಗೆ ತಮಗೆ ಗೊತ್ತೇ ಇಲ್ಲ ಎಂದು ಹೇಳಿದೆ.*

ಅನುಮತಿ. D.C.I.I ಪ್ರಕಾರ ಈ ಯಾವುದೇ ರೀತಿಯ ಅನುಮತಿಯನ್ನು ಕ್ವಿನಕ್ರೈನ್ ವಿಚಾರದಲ್ಲಿ ಕೊಡಲಾಗಿಲ್ಲ. ಆದ್ದರಿಂದ ಇದರ ಬಳಕೆ ಕಾನೂನಿನ ಪ್ರಕಾರ ಅಪರಾಧವಾಗುತ್ತದೆ.

(5) ಕ್ವಿನಕ್ರೈನ್ ಬಳಸುವುದಕ್ಕೋಸ್ಕರ ಎಲ್ಲಾ ಕಾನೂನನ್ನು ಮುರಿಯಲಾಗಿದೆ. ಯಾರನ್ನೂ ಶಿಕ್ಷಿಸುವಂತಿಲ್ಲ.

ಕ್ವಿನಕ್ರೈನ್ ಗುಳಿಗೆಗಳು ಭಾರತಕ್ಕೆ ಹೇಗೆ ಬಂದವೆಂದು ಕಂಡು ಹಿಡಿಯುವಲ್ಲಿ ಭಾರತವು ಜಯಪ್ರದವಾಗಲಿಲ್ಲ. D.C.I. ಹೇಳುವ ಹಾಗೆ ಕೆಲವು ವ್ಯಕ್ತಿಗಳು ಪರದೇಶದಿಂದ ತಮ್ಮ ಬ್ಯಾಗುಗಳಲ್ಲಿ ಕದ್ದು ತಂದಿರಬಹುದು. ಅಥವಾ ಕ್ವಿನಕ್ರೈನ್ ಮಲೇರಿಯಾದ ಗುಳಿಗೆ ಎಂಬ ಹೆಸರಿನಲ್ಲಿ ಇಂಡಿಯಾಕ್ಕೆ ಬೇರೆ ವಿಧದ ಬಳಕೆಗಾಗಿ ಸರಬರಾಜಾಗಿರಬಹುದು. ಅಥವಾ ಇದು ಒಂದು ಕದ್ದು ಮಾರುತ್ತಿರುವ ಔಷಧಿಯಾಗಿರಬಹುದು. ಇಲ್ಲ, ಮೆಪಾಕ್ರೈನನ್ನು ಕ್ವಿನಕ್ರೈನ್ ಗುಳಿಗೆಗಳನ್ನಾಗಿಸಿ ಅಡಿಗೆ ಮನೆಯಲ್ಲೋ ಅಥವಾ ಗರಾಜ್‌ಗಳಲ್ಲಿಯೋ ಮಾಡುತ್ತಿರಬಹುದು. ಈ ಬಗ್ಗೆ DCIಗೇ ಸರಿಯಾದ ಮಾಹಿತಿ ಇಲ್ಲ.

ವೈದ್ಯಕೀಯ ಕ್ಷೇತ್ರದಲ್ಲಿರಬೇಕಾದ ಮೂಲಭೂತವಾಗಿರುವ 'ನೀತಿ'ಯನ್ನೂ ವೈದ್ಯರುಗಳು ಗಮನಿಸದಿರುವುದು ದುರ್ದೈವದ ಸಂಗತಿ. ತಮ್ಮ ರೋಗಿಯ ಆರೋಗ್ಯವೇ ತಮ್ಮ ಮೊದಲ ಗುರಿಯಾಗಿರಬೇಕು ಎಂದು ಹೇಳಬೇಕಾದ ವೈದ್ಯರು ಜನಸಂಖ್ಯಾ ನಿಯಂತ್ರಣ ಮುಖ್ಯ ಚಳುವಳಿಯಾಗಬೇಕೆನ್ನುತ್ತಾ ತಮ್ಮ ರೋಗಿಗಳ ಆರೋಗ್ಯವನ್ನು ಗಣನೆಗೇ ತೆಗೆದುಕೊಳ್ಳದಿರುವುದು ವಿಪರ್ಯಾಸವಾಗಿದೆ. ಕ್ವಿನಕ್ರೈನ್‌ನ ಪ್ರತಿಪಾದಕರು ತಾವು ದೇಶ ಸೇವೆಗಾಗಿ ಜನಸಂಖ್ಯಾ ನಿಯಂತ್ರಣದಲ್ಲಿ ತಮ್ಮನ್ನು ತೊಡಗಿಸಿಕೊಂಡುದಾಗಿ ನುಡಿಯುತ್ತಾರೆ. ಕ್ವಿನಕ್ರೈನ್ ಬಗ್ಗೆ ಸಿಕ್ಕದಿರುವ, ಸಿಕ್ಕಿರುವ ಮಾಹಿತಿಗಳು, ಕಾನೂನುಬಾಹಿರ ಔಷಧಿ ಮಹಿಳೆಯರ ಮೇಲೆ ನಿರಾಯಾಸವಾಗಿ ಪ್ರಯೋಗವಾಗುತ್ತಿರುವುದು ನಮ್ಮ ವೈದ್ಯಕೀಯ ಕಾನೂನು ವ್ಯವಸ್ಥೆಯ ಒಂದು ದೊಡ್ಡ ವಿಡಂಬನೆಯಾಗಿದೆಯೆಂದೇ ಹೇಳಬಹುದಾಗಿದೆ.

●

ವರದಕ್ಷಿಣೆ ಹಿಂದೆ ಸಂಪ್ರದಾಯ
ಆದರೆ ಇಂದು ಅದು ಕಡ್ಡಾಯ
ಇದರಿಂದ ಹೆಣ್ಣುಗಳು ಹೆಚ್ಚಾಗಿ
ಅನುಭವಿಸುತ್ತಿದ್ದಾರೆ ಅಪಾಯ
ಇದಕ್ಕೆ ಗಂಡುಗಳು ಹೇಳಬೇಕು ವಿದಾಯ

ಗಂಡಿನವರಿಗೆ ಕೊಡುವ ವರದಕ್ಷಿಣೆ
ಇಂದು ಅದಕ್ಕೆ ಹೆಚ್ಚು ಮನ್ನಣೆ
ಇದರಿಂದ ನಡೆಯುತ್ತಿದೆ ಹೆಚ್ಚಿನ ಶೋಷಣೆ
ವರದಕ್ಷಿಣೆ ನಿಲ್ಲಿಸಲು ಯುವಕರು
ಪಣ ತೊಟ್ಟರೆ ಅದೇ ದೊಡ್ಡ ಸಾಧನೆ.

*H. B. ಹುಳಿಯಾರ್ ಸತೀಶ್*

# ಸ್ತ್ರೀರೋಗ ಹಾಗು ಪ್ರಸೂತಿ ವೈದ್ಯರುಗಳ ಅಂತರರಾಷ್ಟ್ರೀಯ ಕಾಂಗ್ರೆಸ್ ಸಭೆಯಲ್ಲಿ ಕ್ವಿನಕ್ರೈನ್ ಮೇಲೆ ದಾಳಿ

ಕ್ವಿನಕ್ರೈನನ್ನು ಮೂರನೇ ಜಗತ್ತಿನ ರಾಷ್ಟ್ರಗಳ ಮೇಲೆ ಹೇರುತ್ತಿರುವ ಅಮೇರಿಕಾದ ಡಾ. ಎಲ್‌ಟನ್ ಕೆಸೆಲ್ ಹಾಗೂ ಡಾ. ಸ್ಟೀವನ್ ಮಮ್‌ಫೋರ್ಡ್‌ರನ್ನು-ಕ್ವಿನಕ್ರೈನ್ ಅಲರ್ಟ್ ನೆಟ್‌ವರ್ಕ್‌ನವರು ಖಟುವಾಗಿ ವಿರೋಧಿಸಿದರು. 1997 ಆಗಸ್ಟ್ 7ರಂದು ಕೋಪನ್‌ಹೇಗ್‌ನಲ್ಲಿ ನಡೆದ ಸಭೆಯಲ್ಲಿ ಕ್ವಿನಕ್ರೈನ್‌ನ ಬಗ್ಗೆಗಿನ ಸಂಶಯ, ಅದರ ಅನುಮತಿರಹಿತ ಬಳಕೆ, ಕ್ಲಿನಿಕಲ್ ಪ್ರಯೋಗಗಳ ಬಗ್ಗೆಗಿನ ವಿವರಗಳನ್ನು ಅಲರ್ಟ್ ನೆಟ್‌ವರ್ಕ್‌ನ ಸದಸ್ಯರೊಬ್ಬರು ಹಂಚಿದಾಗ ಸಭೆಯಲ್ಲಿ ಬಹುಜನ ಕ್ವಿನಕ್ರೈನ್ ವಿಧಾನದ ಬಗ್ಗೆ ಒಂದು ಮುಖದ ಚಿತ್ರಣ ಕೊಡುತ್ತಿರುವುದಕ್ಕಾಗಿ ಸಂಘಟಿತರನ್ನು ತೆಗಳಿದರು.

ಈ ಸಭೆಯ ಹಿಂದಿನ ದಿನ KUIU ಎನ್ನುವ ಮಹಿಳಾ ಸಂಘಟನೆಯೊಂದು ಅಭಿವೃದ್ಧಿ ರಾಷ್ಟ್ರಗಳಲ್ಲಿ ಕ್ವಿನಕ್ರೈನ್ ವಿಧಾನ ಬಳಸುತ್ತಿರುವುದರ ಬಗ್ಗೆ ಒಂದು ಪತ್ರಿಕಾ ಹೇಳಿಕೆ ಕೊಟ್ಟಿತ್ತು. ಕೋಪನ್‌ಹೇಗನ್‌ನ ಮೂರು ಮುಖ್ಯ ಪತ್ರಿಕೆಗಳಲ್ಲಿ ಈ ಸುದ್ದಿ ಪ್ರಕಟವಾಗಿತ್ತು. ದಿನಪತ್ರಿಕೆ 'ಇನ್‌ಫಾರ್‌ಮೇಶನ್' ಈ ಬಗ್ಗೆ ವರದಿ ಮಾಡಿತು. ಹಾಗೆಯೇ ಪೊಲಿಟಿಕಲ್ ಹಾಗೂ ಬಿ. ಟಿ. ಡೈಲಿ ಕೂಡಾ. ಈ ಎಲ್ಲಾ ಪತ್ರಿಕೆಗಳಲ್ಲೂ ಮೂರನೇ ಜಗತ್ತಿನ ಮಹಿಳೆಯರನ್ನು ಕ್ವಿನಕ್ರೈನ್‌ನ ಬಳಕೆಗೆ ಗಿನಿಪಿಗ್‌ಗಳಾಗಿ ಬಳಸುತ್ತಿರುವುದನ್ನು ಟೀಕೆ ಮಾಡಿ ಬರೆಯಲಾಗಿತ್ತು.

I.F.F.H (ಅಂತರ್‌ರಾಷ್ಟ್ರೀಯ ಕೌಟುಂಬ ಆರೋಗ್ಯ ಫೆಡರೇಷನ್) ಡಾ. ಕೆಸೆಲ್ ಹಾಗೂ ಮಮ್‌ಫೋರ್ಡ್‌ರ ಸಂಸ್ಥೆ. ಈ ಸಂಸ್ಥೆ ಗೈನೋಕಾಲಜಿಸ್ಟ್ ಹಾಗೂ ಆಬ್ಸ್‌ಟೆಟ್ರಿಕ್ಸ್‌ರ ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಕಾನ್‌ಫರೆನ್ಸ್‌ಗಳಲ್ಲಿ ಈ ವಿಚಾರದ ಬಗ್ಗೆ ಮಾಹಿತಿ ನೀಡುತ್ತದೆ. ಹಾಗೆಯೇ ಇಂತಹ ಕಡೆ ಗುಳಿಗೆ ಹಾಗೂ ಅಳವಡಿಕೆಯ ಉಪಕರಣಗಳನ್ನು ಉಚಿತವಾಗಿ ಹಂಚುತ್ತದೆ.

**ಕೋಪನ್ ಹೇಗನ್ ಸಭೆ**

ಇಲ್ಲಿ ಡಾ. ಜಿ. ಕೆ. ಜೈನ್, ಡಾ. ಕೆಸೆಲ್, ಡಾ. ಮುಲ್ಲೆರ್, ಡಾ. ಆಶಾ ಸೋನ್ (ಇಂಡಿಯ), ಡಾ. ಹಿಯೂ, ಡಾ. ಆಗ್ನೆಸ್ ಡಾ. ಶಿರಾನ್ (ಇಂಡೋನೇಷಿಯ) ಇವರು ಭಾಗವಹಿಸಿದ್ದರು. ಸಭೆಯ ಹೊರಗಡೆ ಕ್ವಿನಕ್ರೈನ್ ವಿರುದ್ಧ ಕರಪತ್ರ ಹಂಚುತ್ತಿರುವವರು ಎಲ್ಲರನ್ನೂ ತಪ್ಪು ದಾರಿಗೆ ಎಳೆಯುತ್ತಿದ್ದಾರೆಂದು ಇವರೆಲ್ಲರ ಅಭಿಪ್ರಾಯವಾಗಿತ್ತು.

ಪಾಲಿಟೆಕಿನ್‌ನ ವರದಿಗಾರ/ಗಾರ್ತಿ ಕ್ವಿನಕ್ರೈನ್ ಕ್ಯಾನ್ಸರ್ ತರುವ ಸಾಧ್ಯತೆಗಳಿವೆ ಎಂದು ಪ್ರಯೋಗಗಳು ತೋರಿಸಿವೆ ಎಂದಾಗ ಡಾ. ಕೆಸೆಲ್ ಇದು ಕ್ಯಾನ್ಸರ್ ತರುವ ಸಾಧ್ಯತೆ ತಳ್ಳಿ ಹಾಕಲಾಗದು, ಆದರೆ ಕುಡಿಯುವ ನೀರಿನ ಫ್ಲೋರೈಡ್‌ನಲ್ಲೂ, ರೋಸ್ಟೆಡ್ ಕಾಫಿಯಲ್ಲಿಯೂ ಸಹ ಈ ರೀತಿಯ ಸಾಧ್ಯತೆಗಳಿಲ್ಲವೇ? ಎಂದರು. ಕ್ವಿನಕ್ರೈನ್‌ನ ಲಾಭದ ಪರಿಣಾಮ ಗಮನಿಸಿದಾಗ ಅದರ ಅಪಾಯದ ಪ್ರಮಾಣ ಕಡಿಮೆ ಎಂದರು.

ಪ್ರಾಣಿಗಳ ಮೇಲೆ ಸಂಶೋಧನೆ ನಡೆಸುವ ಅಗತ್ಯವಿತ್ತು ಎನ್ನುವ ಪ್ರಶ್ನೆಗೆ, ಡಾ. ಕೆಸೆಲ್ ಈಗಾಗಲೇ ಬಳಕೆಯಲ್ಲಿರುವ ಔಷಧಿಯ ಮೇಲೆ ಎಂಟು ಮಿಲಿಯನ್ ಡಾಲರ್ ಯಾರು ಹಾಕುತ್ತಾರೆ ಎಂದು ಅಭಿಪ್ರಾಯ ಪಟ್ಟರು.

ಡಾ. ಜೈನ್ ಸಿಂಪೋಸಿಯಂನಲ್ಲಿ ತಮಗೆ ಇಂಡಿಯಾದ ಆರೋಗ್ಯ ಮಂತ್ರಿಗಳಿಂದ ಅನುಮತಿ ಸಿಕ್ಕಿದೆ ಎಂದಾಗ ಕೆನಡಿಯನ್ ಸಂಶೋಧಕಿ ಡಾ. ಶ್ರೀ. ಮುಲ್ಯೆ ಅದು ಸುಳ್ಳೆಂದು ವಾದಿಸಿದರು. 1997ರ ದಾಖಲೆಯನ್ನು ತೋರಿಸಿದ ಶ್ರೀ ಮುಲ್ಯೆ ಭಾರತೀಯ ಔಷಧ ನಿಯಂತ್ರಣದ ಅಧಿಕಾರಿಗಳು ಅಧಿಕ ವೈಫಲ್ಯತೆ, ಶಾಶ್ವತವಾದ ಗಾಯ ಹಾಗೂ ಗರ್ಭನಾಳದಲ್ಲಿ ಗರ್ಭ ಬೆಳೆಯುವ ಸಾಧ್ಯತೆಗಳಿಂದಾಗಿ ಕ್ವಿನಕ್ರೈನ್ ಪ್ರಯೋಗಗಳನ್ನು ನಿಲ್ಲಿಸಿದುದಾಗಿ ನುಡಿದರು.

**ಸುಳ್ಳು ಹೇಳಿಕೆಗಳಿಗೆ ವಿರೋಧ**

ಡಾ. ಜೈನ್ ತಮಗೆ ವಿಶ್ವ ಆರೋಗ್ಯ ಸಂಸ್ಥೆ ಬೆಂಬಲಿಸಿರುವುದಾಗಿ ನುಡಿದರು. ಆದರೆ ವಿಶ್ವ ಸಂಸ್ಥೆಯ ಪರವಾಗಿ ಮಾತನಾಡಿದ ಅಧಿಕಾರಿ ಪ್ರಾಣಿಗಳ ಮೇಲೆ ಪ್ರಯೋಗ ನಡೆದು ಕ್ವಿನಕ್ರೈನ್ ಕ್ಯಾನ್ಸರ್ ತರುವ ಸಾಧ್ಯತೆ ಇಲ್ಲವೆಂದು ಸಾಬೀತಾಗುವವರೆಗೆ ವಿಶ್ವಸಂಸ್ಥೆ ಕ್ವಿನಕ್ರೈನ್‌ನ ಕ್ಲಿನಿಕಲ್

ಪ್ರಯೋಗಗಳಿಗೆ ಅನುಮತಿ ನೀಡುವುದಿಲ್ಲವೆಂದು ತಿಳಿಸಿದರು. ಡಾ. ಕೆಸೆಲ್ ಈ ವಿಧಾನದಿಂದ ಹೆರಿಗೆಯ ಸಂದರ್ಭದಲ್ಲಿ ಸಾಯುವ ತಾಯಂದಿರನ್ನು ಈ ಮೂಲಕ ರಕ್ಷಿಸಲಾಗುತ್ತದೆ ಎಂದರು. ಹಾಲೆಂಡಿನ ಮಹಿಳೆಯೊಬ್ಬರು ಈ ರೀತಿಯ ಪ್ರಯೋಗಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿಯೇ ಯಾಕೆ ಬಳಸುತ್ತೀರಿ? ಹಾಲೆಂಡಿನಂತಹ ದೇಶದಲ್ಲೂ ಸಮರ್ಥವಾದ ಜನಸಂಖ್ಯಾ ನಿಯಂತ್ರಣ ವಿಧಾನವಲ್ಲ. ತಮ್ಮಂತಹ ದೇಶದಲ್ಲಿ ಯಾಕೆ ಬಳಸುವುದಿಲ್ಲ ಎಂದು ಪ್ಯಾನೆಲ್ ಆಫ್ ಡಾಕ್ಟರ್ಸ್‌ಗೆ ಕೇಳಿದಾಗ ಅಲ್ಲಿದ್ದವರೆಲ್ಲಾ ಚಪ್ಪಾಳೆ ತಟ್ಟಿದರು.

FIGO ಈ ಕಮಿಟಿ ಕ್ವಿನಕ್ರೈನ್‌ನ ಎಲ್ಲಾ ಆರೋಪಗಳನ್ನೂ ಹೊರಬೇಕಾಗುತ್ತದೆ. ಕ್ವಿನಕ್ರೈನ್ ಪ್ರಯೋಗಗಳನ್ನು ಕಾನೂನು ಬಾಹಿರವಾಗಿ ಜಾರಿಗೊಳಿಸುತ್ತಿರುವ ಪ್ರಾಯೋಜಕರನ್ನು ಈ ಬಗ್ಗೆ ಏನೂ ಪ್ರಶ್ನಿಸದೇ ಅಂತರರಾಷ್ಟ್ರೀಯ ಹಂತದಲ್ಲಿ ಕ್ವಿನಕ್ರೈನ್ ಬಗ್ಗೆ ಸಿಂಪೋಸಿಯಂ ಏಕೆ ಏರ್ಪಡಿಸಬೇಕಿತ್ತು ಎಂಬುದೇ ಪ್ರಶ್ನೆ. ಇಂತವುಗಳು ಅವರಿಗೆಲ್ಲ ಒಂದು ನ್ಯಾಯ ಬದ್ಧತೆ ಒದಗಿಸಿಕೊಟ್ಟು ಬಿಡುತ್ತದೆ.

ಸಭೆಯ ಹೊರಗಡೆ ಡಾ. ಜೈನ್ ಸಹೇಲಿಯಿಂದ ಪ್ರಕಟವಾದ 'ದಿ ಸಾರ್‌ಡಿಡ್ ಸ್ಟೋರಿ ಆಫ್ ಕ್ವಿನಕ್ರೈನ್ ಸ್ಟೆರಿಲೈಜೇಶನ್' ಪ್ರತಿ ನೋಡಿದಾಗ ಕುಪಿತರಾಗಿ ನಿಮಗೆಲ್ಲಾ ಯಾರೋ ವಿದೇಶೀ ಹಣ ಕೊಟ್ಟು ತೊಂದರೆ ಮಾಡಿಸುತ್ತಿದ್ದಾರೆ ಎಂದರು. ಶ್ರೀ ಮುಲ್ಯೆ - ನೀವು ಇನ್ನು ಎಲ್ಲಿ ಹೋದರೂ ಕ್ವಿನಕ್ರೈನ್ ಪ್ರಚಾರ ಮಾಡುವಿರಾದರೆ ಅಲ್ಲಿ ಹೆಂಗಸರು ನಿಮ್ಮನ್ನು ತೊಂದರೆಗೆ ಸಿಕ್ಕಿಸುತ್ತಾರೆ ಎಂದರು. ಅದಕ್ಕೆ ಡಾ. ಜೈನ್ 'ನಿಮಗೆ ಗೊತ್ತೆ, ನನ್ನ ಹತ್ತಿರ ICMR ಪತ್ರವಿದೆ' ಎಂದರು. ಶ್ರೀ ಮುಲ್ಯೆ, "ಯಾಕೆ ಸುಳ್ಳು ಹೇಳುತ್ತೀರಿ, ಇದ್ದರೆ ಯಾಕೆ ತೋರಿಸಲಾರಿರಿ?" ಎಂದರು. ಅದಕ್ಕೆ ಡಾ. ಜೈನ್ 'ಇದು ಪಾರ್ಲಿಮೆಂಟಿನ ಭಾಷೆಯೇ ಅಲ್ಲ' ಎಂದರು. ಹಾಗೂ 'ನಾನು ಎಲ್ಲಾ ಕಡೆ ಫೈಲ್ಸ್ ಒಯ್ಯುವುದಕ್ಕಾಗುತ್ತದೆಯೇ?' ಎಂದರು. 'ಇದು ಪಾರ್ಲಿಮೆಂಟ್ ಅಲ್ಲವೆಂದ ಮುಲ್ಯೆ ಅವರು 'ನಮಗೆ ಇಂಡಿಯಾದ ಡ್ರಗ್ ಹೌಸ್‌ನಿಂದ ಹೇಳಿಕೆ ಬಂದಿದೆ. I.C.M.R. ಪತ್ರ ತೋರಿಸಿ' ಎಂದರು.

ಡಾ. ಕೆಸೆಲ್ ಅವರನ್ನು ಪ್ರತಿಯೊಂದು ದೇಶಗಳಲ್ಲಿ ಕ್ವಿನಕ್ರೈನ್ ಶಸ್ತ್ರ ಚಿಕಿತ್ಸೆಯ ವೈಫಲ್ಯದ ಬಗ್ಗೆ ಗಮನ ಸೆಳೆದಾಗ ಅವರು ಅದೊಂದು ಹುಚ್ಚು. ಹಾಗೆಂದು ನೀವು ಕ್ಲಿನಿಕ್ ಹೊರಗಡೆ ವಿರೋಧದ ಮೆರವಣಿಗೆ ಮಾಡಲಿಕ್ಕಾಗುತ್ತದೆಯೇ ಎಂದರು.

ಹಾಗಿದ್ದರೆ ಕ್ವಿನಕ್ರೈನ್ ಬಳಕೆಯನ್ನು ಹೇಗೆ ನಿಲ್ಲಿಸಬೇಕು? ಇನ್ನೊಂದು ಹೆಸರಿನಿಂದ ಇದು ಮತ್ತೆ ಇನ್ನೊಂದು ಕಡೆ ಬಳಕೆಯಾಗುವುದಿಲ್ಲವೆಂದು ಏನು ಗ್ಯಾರಂಟಿ? ಹೆಂಗಸರ ಆರೋಗ್ಯ ಮತ್ತು ರಕ್ಷಣೆಗೆ ಯಾರು ಹೊಣೆ?

ಭಾರತ ಸರ್ಕಾರ ಹಾಗೂ ICMR ವಿರುದ್ಧ ಆಲ್ ಇಂಡಿಯ ಡೆಮಾಕ್ರಟಿಕ್ ವಿಮೆನ್ಸ್ ಅಸೋಸಿಯೇಷನ್ ಹಾಗೂ ಜವಹರಲಾಲ್ ವಿಶ್ವ ವಿದ್ಯಾನಿಲಯದ ಸಾಮಾಜಿಕ ಮತ್ತು ಸಮುದಾಯ ಕೇಂದ್ರದವರು ಪಬ್ಲಿಕ್ ಇಂಟರೆಸ್ಟ್ ಲಿಟಿಗೇಷನ್ ಹೋಗಿರುವುದು ದಿಟ್ಟ ಹೆಜ್ಜೆಯಾಗಿದೆ.

ಡಾ. ಕೆಸೆಲ್ ಮತ್ತು ಡಾ. ಮರ್ಮ್‌ಫೋರ್ಡ್‌ನಂತಹ ಬಲಪಂಥೀಯದವರು ಜನಸಂಖ್ಯಾ ನಿಯಂತ್ರಣದಲ್ಲೇಕೆ ಆಸಕ್ತರು ಎಂಬುದು ಸ್ಪಷ್ಟವಾದ ವಿಚಾರವೇ. ಆದರೂ ಎಲ್ಲಾ ಪ್ರಯೋಗಗಳೂ ದೇಶದ ಹೊರಕ್ಕೆ ನಡೆಯುವುದರಿಂದ ಇವರ ವಿರುದ್ಧ ಕಾನೂನು ಕ್ರಮ ಜಾರಿಗೊಳಿಸುವುದೂ ಕಷ್ಟ ಸಾಧ್ಯವಾಗುತ್ತದೆ. ಕ್ಲಿನಿಕಲ್ ಪ್ರಯೋಗಕ್ಕೆ ಒಳಗಾದ ಹೆಂಗಸರು ಬಡವರಾಗಿರುವುದರಿಂದ ಇವರು ಯಾವುದೇ ಕ್ರಮ ಕೈಗೊಳ್ಳುವುದಿಲ್ಲ.

**ಆಂದೋಲನ ಅಗತ್ಯ**

ಈ ನಿಯಮಬಾಹಿರ ಕ್ವಿನಕ್ರೈನ್ ವಿರುದ್ಧ ಹೋರಾಡಲು ಇರುವ ಒಂದೇ ಮಾರ್ಗವೆಂದರೆ ಎಲ್ಲಾ ಕಡೆ ಕ್ವಿನಕ್ರೈನ್ ಗುಳಿಗೆ ಸರಬರಾಜಾಗದಂತೆ ತಡೆಗಟ್ಟುವುದು. ಎಲ್ಲಾ ದೇಶಗಳಲ್ಲಿ ಮಹಿಳಾ ಸಂಘಟನೆಗಳು ಕ್ವಿನಕ್ರೈನ್ ವಿರುದ್ಧ ಮಾತನಾಡಬೇಕಾಗುತ್ತದೆ. ಇಂತಹ ಹೊಸ ಔಷಧಗಳ ಬಗ್ಗೆ ಮಹಿಳೆಯರು ಹೆಚ್ಚು ಜಾಗೃತರಾಗಿರಬೇಕಾಗುತ್ತದೆ.

●

ಓದುಗರಲ್ಲಿ,

ಪತ್ರಿಕೆ ನಿಮ್ಮ ಕೈ ಸೇರಿದೊಡನೆ ಆ ಸಂಚಿಕೆಯಲ್ಲಿ ಪ್ರಕಟವಾದ ಲೇಖನ, ಇತ್ಯಾದಿಗಳ ಬಗ್ಗೆ ಓದುಗರಿಂದ ಪ್ರತಿಕ್ರಿಯೆಯನ್ನು ಆಹ್ವಾನಿಸುತ್ತಿದ್ದೇವೆ. ಈ ಪ್ರತಿಕ್ರಿಯೆಗಳನ್ನು "ಓದುಗರ ವಿಭಾಗದಲ್ಲಿ" ಪ್ರಕಟಿಸಲಾಗುವುದು.

- ಸಂ. ಮಂಡಳಿ

# ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ - ಸುಪ್ರೀಂ ಕೋರ್ಟಿನ ಸ್ವಾಗತಾರ್ಹ ತೀರ್ಪು

*ಲೈಂಗಿಕ ಕಿರುಕುಳದ ಬಗ್ಗೆ ಸುಪ್ರೀಂ ಕೋರ್ಟಿನ ನಿರ್ದೇಶನ*

ಕಛೇರಿಗಳಲ್ಲಿ, ಕೆಲಸ ಮಾಡುವ ಇತರೆ ಸ್ಥಳಗಳಲ್ಲಿ ಲಿಂಗಾಧಾರಿತ ಅಸಮಾನತೆ ತಾರತಮ್ಯ ಮಾಡುವುದು ಬಹು ದಿನಗಳಿಂದ ಇರುವ ಸಮಸ್ಯೆ. ಗಂಡಸರ ಈ ಪೂರ್ವಗ್ರಹ ಹಾಗೂ ಅಧಿಕಾರಶಾಹಿ ವ್ಯವಸ್ಥೆಯಲ್ಲಿ ಲೈಂಗಿಕ ಕಿರುಕುಳವೂ ಒಂದು ಮುಖ್ಯ ಸಮಸ್ಯೆಯಾಗಿ ಸ್ತ್ರೀಯರನ್ನು ಕಾಡುತ್ತಿದೆ. ಆದರೆ ಇತ್ತೀಚೆಗೆ ಸುಪ್ರೀಂ ಕೋರ್ಟು ನೀಡಿರುವ ತೀರ್ಪಿನಲ್ಲಿ ಈ ಬಗೆಯ ದೌರ್ಜನ್ಯವನ್ನು ಹತ್ತಿಕ್ಕುವ ಒಂದು ಸ್ವಾಗತಾರ್ಹ ನಿರ್ಣಯ ಹೊರಬಿದ್ದಿದೆ. ಇಲ್ಲಿ ಅದು ನೀಡಿರುವ ಮಾರ್ಗಸೂಚಿಯನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಛೇರಿಗಳು, ಕಾರ್ಖಾನೆಗಳು ಅವುಗಳದ್ದೇ ಆದ ತೊಡಕನ್ನು ಹೊಂದಿದ್ದರೂ, ಅದನ್ನು ಧೃಡನಿಶ್ಚಯದಿಂದ ಜಾರಿಗೊಳಿಸಲೇ ಬೇಕು ಎಂದು ಹಲವಾರು ಸಂಘಟನೆಗಳು, ವಕೀಲರು, ಸ್ತ್ರೀವಾದಿಗಳು ಒತ್ತಾಯಿಸಿದ್ದಾರೆ. 'ಈ ಮಾರ್ಗಸೂಚಿಯನ್ನು ಅನುಷ್ಠಾನಗೊಳಿಸಿದಲ್ಲಿ, ಲೈಂಗಿಕ ಕಿರುಕುಳ ಕೊಡಲು ಯತ್ನಿಸುವ ಪುರುಷರಿಗೆ ಇದೊಂದು ಕಡಿವಾಣದಂತಿದ್ದು ಅವರನ್ನು ಇದು ನಿಯಂತ್ರಿಸುತ್ತದೆ. ಹಾಗೆಯೇ ಈ ಸಂದರ್ಭದಲ್ಲಿ, ಇಂತಹ ಸಮಸ್ಯೆಗಳ ಬಗ್ಗೆ ಸಾಮಾಜಿಕ ಧೋರಣೆಯೂ ಬದಲಾಗಬೇಕಾಗಿದೆ.

ಇಲಾಖೆ, ಕಂಪನಿ, ಸಂಸ್ಥೆ, ಸಂಘಟನೆ, ಕಾರ್ಖಾನೆ, ಕಛೇರಿ ಮತ್ತಿತರ ಎಲ್ಲಾ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರಿಗೆ ಲೈಂಗಿಕ ಕಿರುಕುಳವಾಗದಂತೆ ನೋಡಿಕೊಳ್ಳುವುದು, ಲೈಂಗಿಕ ಕಿರುಕುಳ ಪ್ರಕರಣವೇನಾದರೂ ನಡೆದಲ್ಲಿ ವಿಚಾರಣೆ ನಡೆಸುವುದು ಬಗೆಹರಿಸುವುದು ಅಥವಾ ಅಪರಾಧಿಯನ್ನು ಶಿಕ್ಷಿಸುವುದಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ಮಾಲೀಕನ ಅಥವಾ ಉನ್ನತ ಅಧಿಕಾರಿಯ ಕರ್ತವ್ಯ.

*ಲೈಂಗಿಕ ಕಿರುಕುಳ ಎಂದರೆ*

ಎ) ಮುಜುಗರ ಉಂಟು ಮಾಡುವ ಹಾಗೂ ಲೈಂಗಿಕಾರ್ಥ ಹೊರಡಿಸುವ ಪ್ರತ್ಯಕ್ಷ ಅಥವಾ ಪರೋಕ್ಷ ವರ್ತನೆ.

ಬಿ) ದೈಹಿಕ ಸಂಪರ್ಕ ಮತ್ತು ಸೂಚನೆಗಳು

ಸಿ) ಲೈಂಗಿಕಾರ್ಥ ಹೊರಡಿಸುವ ಮಾತುಗಳ ಬಳಕೆ

ಡಿ) ಅಶ್ಲೀಲ ಚಿತ್ರಗಳನ್ನು ತೋರಿಸುವಿಕೆ

ಇ) ಲೈಂಗಿಕ ಸಂಪರ್ಕಕ್ಕೆ ಬರಲು ಕೋರಿಕೆ ಅಥವಾ ಒತ್ತಡ

ಎಫ್) ಮುಜುಗರ ಉಂಟು ಮಾಡುವಂಥ ಹಾಗೂ ಲೈಂಗಿಕ ಸ್ವರೂಪದ ಯಾವುದೇ ಆಂಗಿಕ ಕ್ರಿಯೆ ಅಥವಾ ಮಾತುಗಳ ಬಳಕೆ

ಇಂಥ ಯಾವುದೇ ಪರಿಸ್ಥಿತಿಗೆ ನಿಲುಕುವ ಮಹಿಳೆಯು, ಆಕೆಯು ವೇತನ, ಗೌರವಧನ ಪಡೆಯುವ ನೌಕರಳಾಗಿರಲಿ ಅಥವಾ ಸ್ವಯಂಸೇವೆ ಸಲ್ಲಿಸುವವಳಾಗಿರಲಿ, ಮಾನಸಿಕ ಹಿಂಸೆಗೆ ಗುರಿಯಾಗುವ ಸಾಧ್ಯತೆ ಇದೆ; ಇದು ಗಂಭೀರವಾಗಿ ಪರಿಣಮಿಸಿದಾಗ, ಆಕೆಯು ಆರೋಗ್ಯ ಮತ್ತು ರಕ್ಷಣೆಯ ಭೀತಿಗೆ ಒಳಗಾಗಬಹುದಾಗಿದೆ. ತನ್ನ ಕೆಲಸಕ್ಕೆ ಸಂಚಕಾರ ಬರಬಹುದೆಂದು, ತನಗೆ ಮುಂಬಡ್ತಿ ಸಿಕ್ಕದೇ ಹೋಗಬಹುದೆಂದು, ತನ್ನ ಮೇಲೆ ಪುರುಷ ಸಹೋದ್ಯೋಗಿಗಳು ಸೇಡಿನ ಮನೋಭಾವ ತಾಳಬಹುದೆಂದು ಭಾವಿಸಲು ಸಾಕಷ್ಟು ಆಧಾರಗಳಿದ್ದಾಗ, ಮಹಿಳೆಯು ಇಂಥ ಹಿಂಸೆ ಮತ್ತು ಭೀತಿಯನ್ನು ನಿರಂತರವಾಗಿ ಅನುಭವಿಸುತ್ತಾಳೆ. ಲೈಂಗಿಕ ಕಿರುಕುಳವನ್ನು ಪ್ರತಿಭಟಿಸಿದಾಗ ಪ್ರತಿಕೂಲ ಪರಿಣಾಮಗಳೂ ಕಾಣಿಸಿಕೊಳ್ಳಬಹುದಾಗಿದೆ.

ಖಾಸಗಿ ಅಥವಾ ಸಾರ್ವಜನಿಕ ವಲಯದ ಎಲ್ಲಾ ಮಾಲೀಕರು ಅಥವಾ ಉನ್ನತ ಅಧಿಕಾರಿಗಳು ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಈ ಸಹಜವಾದ ಹೊಣೆಗಾರಿಕೆಯಿಂದ ನುಣುಚಿಕೊಳ್ಳದೇ ಅವರು, ಈ ಕೆಳಕಾಣಿಸಿದ ಕ್ರಮಗಳನ್ನು ಜರುಗಿಸಬೇಕು :

(1) ಲೈಂಗಿಕ ಕಿರುಕುಳವನ್ನು ನಿಷೇಧಿಸಿರುವ ಬಗ್ಗೆ ಸ್ಪಷ್ಟ ಪ್ರಕಟಣೆಯನ್ನು ಹೊರಡಿಸಿ, ಅದನ್ನು ಸೂಕ್ತ ರೀತಿಯಲ್ಲಿ ಪ್ರಸಾರ ಮಾಡಬೇಕು.

(2) ಸರ್ಕಾರಿ ಮತ್ತು ಸಾರ್ವಜನಿಕ ವಲಯಗಳಲ್ಲಿನ ನೌಕರರ ಶಿಸ್ತು ಮತ್ತು ನಡತೆಗೆ ಸಂಬಂಧಿಸಿದಂತೆ ರಚನೆಯಾಗಿರುವ ನಿಯಮ - ನಿಬಂಧನೆಗಳಲ್ಲಿ "ಲೈಂಗಿಕ ಕಿರುಕುಳವನ್ನು ನಿಷೇಧಿಸಲಾಗಿರುವ" ಅಂಶವನ್ನು ಸೇರ್ಪಡೆ ಮಾಡಬೇಕು; ಲೈಂಗಿಕ ಕಿರುಕುಳವನ್ನು ನೀಡಿದವರಿಗೆ ವಿಧಿಸಲಾಗುವ ದಂಡ ಶಿಕ್ಷೆ ಬಗ್ಗೆ ವಿವರಿಸಬೇಕು.

**ಲೈಂಗಿಕ ಕಿರುಕುಳವನ್ನು ತಡೆಗಟ್ಟುವ ಬಗ್ಗೆ ಸುಪ್ರೀಂ ಕೋರ್ಟ್ ನೀಡಿರುವ ಮಾರ್ಗದರ್ಶಿ ಅಂಶಗಳ ಹಿನ್ನೆಲೆಯಲ್ಲಿ ರೂಪಿಸಬಹುದಾದ ಕಾರ್ಯ ಯೋಜನೆಗಳು**

(1) ಸುಪ್ರೀಂ ಕೋರ್ಟ್ ಶಿಫಾರಸು ಮಾಡಿರುವಂತೆ ಕಾಯ್ದೆ ಮಾಡಬೇಕೆಂದು ಕೇಂದ್ರ-ರಾಜ್ಯ ಸರ್ಕಾರಗಳನ್ನು ಒತ್ತಾಯಿಸುವುದು.

(2) ಸುಪ್ರೀಂ ಕೋರ್ಟಿನ ಮಾರ್ಗದರ್ಶಿ ಅಂಶಗಳ ಬಗ್ಗೆ ಸಾಮಾಜಿಕ ಕಾರ್ಯಕರ್ತರು, ಪ್ರಜಾಪ್ರಭುತ್ವವಾದಿ ಸಂಘಟನೆಗಳು, ಕಾರ್ಮಿಕ ಸಂಘಗಳು, ವಿದ್ಯಾರ್ಥಿಗಳು, ವಿವಿಧ ಕ್ಷೇತ್ರಗಳಲ್ಲಿನ ಪ್ರಜ್ಞಾವಂತರು - ಹೀಗೆ ಎಲ್ಲರ ಸಹಕಾರವನ್ನು ಮಹಿಳಾ ಸಂಘಟನೆಗಳು ಪಡೆದುಕೊಳ್ಳಬೇಕು; ಲೈಂಗಿಕ ಪ್ರಕರಣಗಳಲ್ಲಿ ಅಪರಾಧಿಗಳಾದವರ ವಿರುದ್ಧ ಸಾರ್ವಜನಿಕ ಅಭಿಪ್ರಾಯ ರೂಪಿಸಲು ಶ್ರಮಿಸಬೇಕಾಗಿದೆ. ಇದಕ್ಕಾಗಿ ಕಾರ್ಯ ತಂಡಗಳ ರಚನೆಯಾಗಬೇಕು.

(3) ಸುಪ್ರೀಂ ಕೋರ್ಟಿನ ಮಾರ್ಗದರ್ಶಿ ಅಂಶಗಳನ್ನು ವ್ಯಾಪಕವಾಗಿ ಪ್ರಚಾರ ಮಾಡಬೇಕು.

(4) ಇಲಾಖೆ, ಕಂಪನಿ, ಸಂಸ್ಥೆ, ಸಂಘಟನೆ, ಕಾರ್ಖಾನೆ, ಕಚೇರಿ ಮತ್ತಿತರ ಕಡೆ ಕೆಲಸ ಮಾಡುತ್ತಿರುವ ಹಾಗೂ ಬಸ್-ರೈಲುಗಳಲ್ಲಿ ಪ್ರಯಾಣಿಸುವ ಮಹಿಳೆಯರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸಬೇಕಾಗಿದೆ.

(5) ಕಾಯ್ದೆ ಪಾಸಾಗುವವರೆಗಿನ ಅವಧಿಯಲ್ಲಿ ಸುಪ್ರೀಂ ಕೋರ್ಟಿನ ನಿರ್ದೇಶನಗಳನ್ನು ಜಾರಿಗೊಳಿಸುವಂತೆ ರಾಜ್ಯ : ಕೇಂದ್ರ ಸರ್ಕಾರಗಳ ಮೇಲೆ ಒತ್ತಡ ತರಬೇಕು; ಇದಕ್ಕಾಗಿ ಕರಪತ್ರ ಪ್ರಕಟಣೆ, ಗುಂಪು ಸಭೆ, ಕಚೇರಿ - ಬ್ಯಾಂಕ್ - ಕಾರ್ಖಾನೆ ಬಳಿ ಸಭೆಗಳನ್ನು ನಡೆಸಬೇಕು.

(6) ಸರ್ಕಾರದ ಮೇಲೆ ಒತ್ತಡ ತರಲು ಅಗತ್ಯವಾದ ಕಾರ್ಯತಂತ್ರವನ್ನು ರೂಪಿಸಬೇಕು.

(7) ಕಿರುಕುಳಕ್ಕೆ ಒಳಗಾದ ಮಹಿಳೆಯರಿಗೆ ಸಂಪರ್ಕಿಸಲು ಸಾಧ್ಯವಾಗುವಂತೆ ವಿವಿಧ ಕಡೆಗಳಲ್ಲಿ ಕಾರ್ಯಾಚಾರಣೆ ಕೇಂದ್ರಗಳನ್ನು ಸ್ಥಾಪಿಸಬೇಕು; ಈ ಬಗ್ಗೆ ವ್ಯಾಪಕ ಪ್ರಚಾರ ಮಾಡಬೇಕು.

(8) ಸುಪ್ರೀಂ ಕೋರ್ಟಿನ ಮಾರ್ಗದರ್ಶಿ ಅಂಶಗಳನ್ನು ಸಾರ್ವಜನಿಕವಾಗಿ ಸೂಕ್ತ ರೀತಿಯಲ್ಲಿ ಪ್ರದರ್ಶಿಸಲು ಇಲಾಖೆ, ಕಂಪನಿ, ಸಂಸ್ಥೆ, ಸಂಘಟನೆ, ಕಾರ್ಖಾನೆ, ಕಚೇರಿ ಮುಂತಾದವುಗಳ ಮುಖ್ಯಸ್ಥರನ್ನು ಒತ್ತಾಯಿಸಬೇಕು.

(9) ಕಿರುಕುಳಕ್ಕೆ ಒಳಗಾದ ಮಹಿಳೆಯರಿಗೆ ಹಾಗೂ ಇವರಿಗಾದ ಅನ್ಯಾಯವನ್ನು ಖಂಡಿಸುವವರಿಗೆ ರಕ್ಷಣೆ ಹಾಗೂ ಉದ್ಯೋಗದ ಭದ್ರತೆ ಇರುವಂತೆ ನೋಡಿಕೊಳ್ಳಬೇಕು.

(10) ಸುಪ್ರೀಂ ಕೋರ್ಟ್ ಈಗ ನೀಡಿರುವ ಮಾರ್ಗದರ್ಶಿ ಅಂಶಗಳು ಅಸಂಘಟಿತ ಕ್ಷೇತ್ರಗಳಲ್ಲಿನ ಹಾಗೂ ಕೃಷಿ ಕ್ಷೇತ್ರಗಳಲ್ಲಿನ ಮಹಿಳೆಯರಿಗೆ ಅನ್ವಯವಾಗುತ್ತಿಲ್ಲ; ಇದನ್ನು ಸ್ಪಷ್ಟಪಡಿಸಿ ನಿರ್ದೇಶನಗಳ ಆಶಯವು ಅರ್ಥಪೂರ್ಣವಾಗಿ ವಿಸ್ತಾರವಾಗುವಂತೆ ಪರಿಪೂರ್ಣ ಕಾಯ್ದೆ ಮಾಡಲು ಶಾಸಕಾಂಗದ ಮೇಲೆ ಒತ್ತಡ ತರಬೇಕು.

(11) ರಾಜಸ್ಥಾನದ ದಲಿತ ಸಾಥಿನ್ ಭನ್ವಾರಿ ದೇವಿಗೆ ನ್ಯಾಯ ಸಿಗಬೇಕೆಂದು ಆಗ್ರಹಿಸಿ, ರಾಷ್ಟ್ರಾದ್ಯಂತ ಪ್ರಚಾರಾಂದೋಲನ ನಡೆಸಬೇಕು.

ಭಾರತದಲ್ಲಿನ ಲಕ್ಷಾಂತರ ದುಡಿಯುವ ಮಹಿಳೆಯರು ಗೌರವದಿಂದ ಕೆಲಸ ಮಾಡುವಂತಾಗುವ ಪರಿಸ್ಥಿತಿಯನ್ನು ನಿರ್ಮಾಣ ಮಾಡಬೇಕಾಗಿದೆ. ಮಹಿಳೆಯರನ್ನು ಸಮಾನವಾಗಿ ಪರಿಗಣಿಸುವ ಎಲ್ಲರ ಬೆಂಬಲವನ್ನು ಪಡೆದು, ಮಹಿಳಾ ಸಂಘಟನೆಗಳು ಸಂಘಟಿತ ಹಾಗೂ ವ್ಯವಸ್ಥಿತ ಹೋರಾಟವನ್ನು ನಡೆಸಬೇಕಾಗಿದೆ.

*(ಕೃಪೆ : ದ ವಾಯ್ಸ್ ಆಫ್ ಪೀಪಲ್, ಅವೇಕನಿಂಗ್ ಮಾಸ ಪತ್ರಿಕೆ, ಸಂಗ್ರಹ : ಮಂಗಳೂರ ವಿಜಯ)*

(3) ಖಾಸಗಿ ಸಂಸ್ಥೆಗಳ ಮಾಲೀಕರು ಮೇಲೆ ಸೂಚಿಸಿದ ಅಂಶಗಳನ್ನು ಕೈಗಾರಿಕಾ ಉದ್ಯೋಗ ಕಾಯ್ದೆ (ಖಾಯಂ ಆದೇಶಗಳು) 1946ರಲ್ಲಿ ಸೇರ್ಪಡೆ ಮಾಡಲು ಕ್ರಮ ಕೈಗೊಳ್ಳಬೇಕು.

(4) ಕೆಲಸ ಮಾಡಲು ಉತ್ತಮ ವಾತಾವರಣವನ್ನು ಅಂದರೆ ವಿಶ್ರಾಂತಿ, ಆರೋಗ್ಯ, ಶುಚಿತ್ವ ಮುಂತಾದವುಗಳಿಗೆ ಅವಕಾಶ ಕಲ್ಪಿಸುವುದಲ್ಲದೆ ಮಹಿಳಾ ಉದ್ಯೋಗಿಗಳಿಗೆ ಮುಜುಗರ ಉಂಟು ಮಾಡುವ ವಾತಾವರಣ ಇರದಂತೆ ಮಾಲೀಕರು ಮತ್ತು ಉನ್ನತ ಅಧಿಕಾರಿಗಳು ನೋಡಿಕೊಳ್ಳಬೇಕು. ಮಹಿಳೆ ಎಂಬ ಕಾರಣಕ್ಕಾಗಿ ತನ್ನನ್ನು ತಾರತಮ್ಯ ನೀತಿಗೆ ಗುರಿಯಾಗಿಸಲಾಗುತ್ತಿದೆ ಎಂಬ ಆಧಾರಸಹಿತ ಭಾವನೆಯು ಯಾವುದೇ ಮಹಿಳೆಗೆ ಬಾರದಂತೆ ನೋಡಿಕೊಳ್ಳಬೇಕು.

**ಕ್ರಿಮಿನಲ್ ಮೊಕದ್ದಮೆ**

ಐ.ಪಿ.ಸಿ. ಅಥವಾ ಇನ್ನಾವುದೇ ಕಾಯ್ದೆ ಅಡಿಯಲ್ಲಿ ಅಪರಾಧ ಎನಿಸುವಂಥ ಲೈಂಗಿಕ ಕಿರುಕುಳ ಪ್ರಕರಣವು ಗಮನಕ್ಕೆ ಬಂದಾಗ ಮಾಲೀಕ ಅಥವಾ ಉನ್ನತ ಅಧಿಕಾರಿಯು ಸಂಬಂಧಿಸಿದ ಅಧಿಕಾರಿಗೆ ದೂರು ನೀಡಿ, ಸೂಕ್ತವಾದ ಕ್ರಮ ಜರುಗುವಂತೆ ನೋಡಿಕೊಳ್ಳಬೇಕು.

ಮುಖ್ಯವಾಗಿ ಮೊಕದ್ದಮೆ ಹೂಡಿದವರು, ಅವರಿಗೆ ಬೆಂಬಲ ನೀಡಿದವರು, ಸಾಕ್ಷ್ಯ ಹೇಳಿದವರು - ಈ ಯಾರ ಮೇಲೂ ಸೇಡಿನ ಕ್ರಮ ಜರುಗಕೂಡದು. ಮೊಕದ್ದಮೆಯನ್ನು ಹೂಡಿದವರಿಗೆ ತಮ್ಮ ಅಥವಾ ಆರೋಪಿಗಳ ವರ್ಗಾವಣೆಗೆ ಒತ್ತಾಯಿಸುವ ಅವಕಾಶವಿದೆ.

**ಶಿಸ್ತಿನ ಕ್ರಮ**

ಸಂಬಂಧಪಟ್ಟ ಸೇವಾನಿಯಮಗಳ ಪ್ರಕಾರ, ಯಾರೇ ಒಬ್ಬರ ನಡವಳಿಕೆಯು ಅಸಭ್ಯವೆಂದು ಮೇಲ್ನೋಟಕ್ಕೆ ಸಾಬೀತಾದಲ್ಲಿ, ಅಂಥವರ ಮೇಲೆ ಸೂಕ್ತ ಕ್ರಮವನ್ನು ಮಾಲೀಕ ಅಥವಾ ಉನ್ನತ ಅಧಿಕಾರಿ ಜರುಗಿಸಬೇಕು.

**ದೂರು ವಿಧಾನ**

ಸೇವಾನಿಯಮಗಳ ಪ್ರಕಾರ ಕ್ರಮ ಜರುಗಿಸುವುದಲ್ಲದೆ, ಉದ್ಯೋಗಿಗಳು ದೂರು ನೀಡಲು ಒಂದು ವಿಧಾನವನ್ನು ರೂಪಿಸುವುದು ಅಗತ್ಯ. ಇದು ಮಾಲೀಕನ ಅಥವಾ ಉನ್ನತ ಅಧಿಕಾರಿಯ ಹೊಣೆ. ಕಿರುಕುಳಕ್ಕೊಳಗಾದ ನಿಗದಿತ ಕಾಲಾವಧಿಯಲ್ಲಿ ಪರಿಹಾರ ಸಿಕ್ಕುವ ಹಾಗೆ ಈ ವಿಧಾನವು ರೂಪುಗೊಳ್ಳಬೇಕು.

**ದೂರು ಸಮಿತಿ**

ದೂರು ವಿಧಾನವನ್ನು ರೂಪಿಸುವ ಪ್ರಕ್ರಿಯೆಯಲ್ಲಿ, ಅಗತ್ಯವಾದ ಸಂದರ್ಭಗಳಲ್ಲಿ, ದೂರು ಸಮಿತಿಯು ವಿಶೇಷ ಸಲಹೆಗಾರ ಹಾಗೂ ಸಿಬ್ಬಂದಿ ನೇಮಕಾತಿಗೂ ಮಾಲೀಕ ಅಥವಾ ಉನ್ನತ ಅಧಿಕಾರಿಯು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಬೇಕು.

ದೂರು ಸಮಿತಿಯ ಮುಖ್ಯಸ್ಥರು ಮಹಿಳೆಯಾಗಿರಬೇಕು; ಈ ಸಮಿತಿಯಲ್ಲಿ ಕನಿಷ್ಠ ಶೇಕಡಾ 50ರಷ್ಟಾದರೂ ಮಹಿಳೆಯರು ಇರಬೇಕು. ಮಾಲೀಕ ಅಥವಾ ಉನ್ನತ ಅಧಿಕಾರಿಗಳಿಂದ ಬರಬಹುದಾದ ಒತ್ತಡಗಳನ್ನು ಸಮರ್ಥವಾಗಿ ಎದುರಿಸುವ ಉದ್ದೇಶದಿಂದ, ಈ ಸಮಿತಿಯಲ್ಲಿ ಮೂರನೇ ಬಣ - ಇವರು ಸರ್ಕಾರೇತರ ಸ್ವಯಂಸೇವಾ ಸಂಘಟನೆಯ ಪ್ರತಿನಿಧಿಯಾಗಿರಬಹುದು ಅಥವಾ ಇಂಥ ವಿಷಯಕ್ಕೆ ಸಂಬಂಧಿಸಿದಂತೆ ತಿಳುವಳಿಕೆ ಮತ್ತು ಅನುಭವ ಹೊಂದಿದವರಾಗಿರಬಹುದು - ವನ್ನೂ ಸೇರ್ಪಡೆ ಮಾಡಿಕೊಳ್ಳಬೇಕು.

ದೂರು ಸಮಿತಿಯು ದೂರುಗಳ ಬಗ್ಗೆ ಮತ್ತು ಆ ಕುರಿತು ಕೈಗೊಂಡ ಕ್ರಮಗಳ ಬಗ್ಗೆ ವಾರ್ಷಿಕ ವರದಿಯನ್ನು ಸಿದ್ಧಪಡಿಸಿ, ಈ ವರದಿ ಮೇಲೆ ಹಾಗೂ ಮಾಗದರ್ಶಿ ಅಂಶಗಳಿಗೆ ಸಂಬಂಧಪಟ್ಟಂತೆ ಮಾಲೀಕ ಅಥವಾ ಉನ್ನತ ಅಧಿಕಾರಿಯು ಕೈಗೊಂಡ ಪರಿಶೀಲನಾ ವರದಿಯನ್ನು ಮತ್ತು ಕ್ರಮಗಳನ್ನು ಮಾಲೀಕ ಅಥವಾ ಉನ್ನತ ಅಧಿಕಾರಿಯು ಈ ವರದಿ ಮೇಲೆ ಹಾಗೂ ಮಾರ್ಗದರ್ಶಿ ಅಂಶಗಳಿಗೆ ಸಂಬಂಧಪಟ್ಟಂತೆ ಕೈಗೊಂಡ ಮಾಲೀಕ ಅಥವಾ ಉನ್ನತ ಅಧಿಕಾರಿಯು ಈ ವರದಿ ಮೇಲೆ ಕೈಗೊಂಡ ಪರಿಶೀಲನಾ ವರದಿಯನ್ನು ಮತ್ತು ಮಾರ್ಗದರ್ಶಿ ಅಂಶಗಳ ಬಗ್ಗೆ ಕೈಗೊಂಡ ಕ್ರಮಗಳನ್ನು ಪಡೆದುಕೊಂಡು ಇವುಗಳನ್ನು ಸಂಬಂಧಪಟ್ಟ ಸರ್ಕಾರಿ ಇಲಾಖೆಗೆ ಕಳಿಸಬೇಕು.

**ನೌಕರರ ಹಕ್ಕು**

ನೌಕರರೊಂದಿಗೆ ನಡೆಸಲಾಗುವ ಸಭೆಗಳಲ್ಲಿ, ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದ ವಿಷಯಗಳನ್ನು ಪ್ರಸ್ತಾಪಿಸಲು ಅವಕಾಶವನ್ನು ಕಲ್ಪಿಸಬೇಕು; ಈ ಬಗ್ಗೆ ನೌಕರರು - ಮಾಲೀಕ : ಉನ್ನತ ಅಧಿಕಾರಿಗಳ ನಡುವೆ ಮುಕ್ತ, ಅರ್ಥಪೂರ್ಣ ಚರ್ಚೆ ನಡೆಯಬೇಕು.

**ಜಾಗೃತಿ**

ಮಹಿಳಾ ಉದ್ಯೋಗಿಗಳಿಗೆ ಈ ಸಂಬಂಧದಲ್ಲಿ ಇರುವ ಹಕ್ಕಿನ ಬಗ್ಗೆ ವ್ಯಾಪಕವಾದ ಪ್ರಚಾರ ನಡೆಯಬೇಕು. ಮಾರ್ಗದರ್ಶಿ ಅಂಶಗಳನ್ನು (ಮತ್ತು ಕಾಯ್ದೆಯಾದ ಬಳಿಕ ಅದನ್ನು) ಮುಖ್ಯ ಸ್ಥಳಗಳಲ್ಲಿ ಸಾರ್ವಜನಿಕವಾಗಿ ಸೂಕ್ತ ರೀತಿಯಲ್ಲಿ ಪ್ರದರ್ಶಿಸಬೇಕು.

**ಮೂರನೇ ಪಕ್ಷದಿಂದ ಕಿರುಕುಳ**

ಮಹಿಳಾ ಉದ್ಯೋಗಿಗೆ ಹೊರಗಿನ ವ್ಯಕ್ತಿಯಿಂದ ಲೈಂಗಿಕ ಕಿರುಕುಳ ಉಂಟಾದರೆ, ಮಾಲೀಕ ಅಥವಾ ಉನ್ನತ ಅಧಿಕಾರಿಯು ಕಿರುಕುಳಕ್ಕೆ ಒಳಗಾದ ಉದ್ಯೋಗಿಗೆ ಬೆಂಬಲ : ಸಹಾಯ ಒದಗಿಸಲು ಹಾಗೂ ಅಂಥ ಕಿರುಕುಳ ಮತ್ತೆ ಆಗುವುದನ್ನು ತಪ್ಪಿಸಲು ಅಗತ್ಯವಾದ ಮತ್ತು ನ್ಯಾಯೋಚಿತವಾದ ಕ್ರಮಗಳನ್ನು ಕೈಗೊಳ್ಳಬೇಕು.

ಈ ಆದೇಶದ ಮೂಲಕ ಕೋರ್ಟು ನೀಡಿರುವ ಮಾರ್ಗದರ್ಶಿ ಅಂಶಗಳನ್ನು ಖಾಸಗಿ ಕ್ಷೇತ್ರಗಳಲ್ಲೂ ಜಾರಿಗೊಳಿಸಲು ಸಾಧ್ಯವಾಗುವಂತೆ ಕೇಂದ್ರ : ರಾಜ್ಯ ಸರ್ಕಾರಗಳು ಕಾಯ್ದೆ ಮಾಡುವುದೂ ಸೇರಿದಂತೆ ಇನ್ನಿತರ ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಲಾಗಿದೆ.

ಈ ಮಾರ್ಗದರ್ಶಿ ಅಂಶಗಳು ಮಾನವ ಹಕ್ಕುಗಳ ಕಾಯ್ದೆ 1993ರ ಅಡಿ ದತ್ತವಾಗುವ ಯಾವ ಹಕ್ಕುಗಳನ್ನೂ ಮೊಟಕುಗೊಳಿಸುವುದಿಲ್ಲ.

ಈ ರೀತಿ, ಕೆಲಸಕ್ಕೆ ಹೋಗುವ ಮಹಿಳೆಯರಿಗೆ ಲಿಂಗನ್ಯಾಯದ ಹಕ್ಕು ರಕ್ಷಣೆ ಮತ್ತು ಜಾರಿಗಾಗಿ ಎಲ್ಲಾ ಇಲಾಖೆ, ಕಂಪನಿ, ಸಂಸ್ಥೆ, ಸಂಘಟನೆ, ಕಾರ್ಖಾನೆ, ಕಚೇರಿ ಮತ್ತಿತರ ಕ್ಷೇತ್ರಗಳ ಮಾಲೀಕರು ಅಥವಾ ಉನ್ನತ ಅಧಿಕಾರಿಗಳು ಮೇಲ್ಕಾಣಿಸಿದ ಮಾರ್ಗದರ್ಶಿ ಅಂಶಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ನಾವು ನಿರ್ದೇಶನವನ್ನು ನೀಡುತ್ತೇವೆ. ಈ ಸಂಬಂಧದಲ್ಲಿ ಸೂಕ್ತವಾದ ಕಾಯ್ದೆ ಬರುವವರೆಗೆ, ಈ ನಿರ್ದೇಶನಗಳು ಕಾಯ್ದೆಬದ್ಧವಾಗಿರುತ್ತವೆ ಮತ್ತು ಅರ್ಹವಾಗಿರುತ್ತವೆ.

**ಸುಪ್ರೀಂಕೋರ್ಟ್ ಮಾರ್ಗಸೂಚಿಯ ಸಾಧಕ - ಬಾಧಕಗಳು**

ಕೆಲವೊಮ್ಮೆ ಕಾರ್ಮಿಕ ಸಂಘಟನೆಗಳು ತಮ್ಮ ಸದಸ್ಯರ ಮೇಲೆ ಹತೋಟಿ ಹೊಂದಿರುವುದರಿಂದ ತೊಂದರೆಗೊಳಗಾದ ಸ್ತ್ರೀಯರು ಮಾಲೀಕರಿಗೆ ಇದರ ಬಗ್ಗೆ ದೂರು ನೀಡಲು ಹೆದರುವುದೂ ಉಂಟು. ಕಾರ್ಮಿಕ ಮುಖಂಡರು ಇಂಥ ಅಧಿಕಾರವನ್ನು ಕೆಲವೊಮ್ಮೆ ದುರುಪಯೋಗಪಡಿಸಿಕೊಳ್ಳುವುದೂ ಉಂಟು. ಅದಕ್ಕೇ ಮಹಿಳಾ ಅಧಿಕಾರಿಗಳು ಅತ್ಯಾಚಾರಕ್ಕೊಳಗಾದ ಮಹಿಳೆ ನಮ್ಮ ಬಳಿಯೇ ನೇರ ಬಂದು ದೂರು ನೀಡಿ ಚರ್ಚಿಸಬೇಕು ಎಂದು ಅಭಿಪ್ರಾಯಪಡುತ್ತಾರೆ.

ಈ ಬಗೆಯ ಲೈಂಗಿಕ ಕಿರುಕುಳ ವ್ಯಾಪಕವಾಗಿದ್ದರೂ ದಾಖಲಾಗುವ ಗಮನಕ್ಕೆ ಬರುವ ಪ್ರಕರಣಗಳು ಹತ್ತು ವರ್ಷಗಳಲ್ಲಿ ಒಂದೋ, ಎರಡೋ ಅಷ್ಟೆ. ಮುಖ್ಯವಾಗಿ ಮೇಲಧಿಕಾರಿಗಳ ಕೊಠಡಿಯಲ್ಲಿ ಡಿಕ್ಟೇಶನ್ ತೆಗೆದುಕೊಳ್ಳುವುದು, ಪತ್ರಗಳ ಡ್ರಾಫ್ಟ್ ಮಾಡುವುದು ಮುಂತಾದ್ದು ಮಾಡುವ ಸ್ಟೆನೋಗ್ರಾಫರ್‌ಗಳು ಎಂಥ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ... ಆದರೆ ಈ ಬಗ್ಗೆ ಸಾರ್ವಜನಿಕವಾಗಿ ಅಥವಾ ಸಂಘಟಕರ ಬಳಿ ಅವರು ಮಾತನಾಡಲು ಇಷ್ಟಪಡುವುದಿಲ್ಲ. ತುಂಬಾ ಧೈರ್ಯವಂತೆಯರಾದ, ಹಾಗೂ ತಮ್ಮ ಬಗ್ಗೆ ಜನ ಕೆಟ್ಟದಾಗಿ ಮಾತನಾಡಿದರೂ ಪರವಾಗಿಲ್ಲ ಎನ್ನುವವರು ಮಾತ್ರ ದೂರು ನೀಡುವುದು ಮತ್ತು ತಪ್ಪಿತಸ್ಥರಿಗೆ ಶಿಕ್ಷೆಯಾಗುವಂತೆ ಮಾಡುವುದು ಇತ್ಯಾದಿ ಕ್ರಮ ಕೈಗೊಳ್ಳುತ್ತಾರೆ.

ಸರ್ಕಾರವೂ ಕೂಡ ಈಗ ಖಾಸಗಿ ಕಂಪೆನಿಗಳು, ಸಂಸ್ಥೆಗಳು ಇವುಗಳ ಮೇಲೆ ಈ ಮಾರ್ಗಸೂಚಿಯನ್ನು ಅನುಸರಿಸುವಂತೆ ಒತ್ತಡ ಹೇರಬಹುದಾಗಿದೆ. ಆಶ್ಚರ್ಯವೆಂದರೆ ಈ ಮಾರ್ಗಸೂಚಿ ಅಥವಾ ಆದೇಶ ಕಾರ್ಮಿಕರು ಹಾಗೂ ಇತರೆ ಸಿಬ್ಬಂದಿಗಳಿಗೆ ಅನ್ವಯವಾಗುವಂತಿದೆಯೇ ಹೊರತು ಉನ್ನತ ಅಧಿಕಾರಿಗಳಿಗೆ ಅನ್ವಯವಾಗುವಂತಿಲ್ಲ. ಆದ್ದರಿಂದ ಇಬ್ಬರು ಉನ್ನತ ಅಧಿಕಾರಿಗಳ (ಅಂದರೆ ಮಹಿಳೆ ಮತ್ತು ಪುರುಷ) ನಡುವೆ ಸಮಸ್ಯೆ ಉದ್ಭವಿಸಿದಾಗ, ಅಂಥ ಇಲಾಖೆಗಳ ಮಾಲೀಕರು ಮಧ್ಯೆ ಪ್ರವೇಶಿಸುವುದಿಲ್ಲ ಮತ್ತು ಇಲ್ಲಿ ಕಾನೂನಿನ ಕ್ರಮ ಜರುಗಿಸುವುದಾಗಲೀ ಮಾಡುವುದಿಲ್ಲ. ಏಕೆಂದರೆ ತಮ್ಮ ಕಂಪೆನಿಯ ಹೆಸರು, ಘನತೆಗೆ ಇದು ಕುಂದು ತರುತ್ತದೆ ಎನ್ನುವ ಕಾರಣದಿಂದ.

ಸ್ತ್ರೀವಾದಿ ವಕೀಲರಾದ ಫ್ಲೇವಿಯಾ ಆಗ್ನೆಸ್‌ರವರು ಹೇಳುವಂತೆ "ಸಂಸ್ಥೆಗಳ ಮಾಲೀಕರು ಕಾನೂನು ಕ್ರಮ ಜರುಗಿಸುವುದಿರಲಿ, ಈ ಸುಪ್ರೀಂ ಕೋರ್ಟಿನ ಆದೇಶವನ್ನು ಎಲ್ಲರಿಗೂ ತಿಳಿಸುವಂತೆ ಸುತ್ತೋಲೆ ಹೊರಡಿಸಿ ಕೆಲಸಗಾರರ ಗಮನಕ್ಕೆ ತಂದರೆ ಈ ಬಗೆಯ

ಕಿರುಕುಳ ಹತ್ತಿಕ್ಕುವಲ್ಲಿ ಅದೊಂದು 'ದೊಡ್ಡ ಸಾಧನೆ' ಎನಿಸಿಕೊಳ್ಳುತ್ತದೆ. ಆಗ ದೌರ್ಜನ್ಯ ಎಸಗುವವರಿಗೆ ಶಿಕ್ಷೆಯ ಭಯ ಅವರನ್ನು ನಿಯಂತ್ರಿಸಿದರೆ, ಮಹಿಳೆಯರು ನಿರ್ಭೀತಿಯಿಂದ ತಲೆ ಎತ್ತಿ ತಿರುಗಾಡುವಂತಾಗುತ್ತದೆ.

ಹಾಗೆಯೇ, ಕೆಲವು ಮಹಿಳೆಯರು ಮಾರ್ಗಸೂಚಿ ಸ್ವಾಗತಾರ್ಹವಾದುದೇನೋ ನಿಜ. ಆದರೆ ಇದನ್ನು ಯಾರು ಓದುತ್ತಾರೆ? ಯಾರು ಅನುಸರಿಸುತ್ತಾರೆ? ಓದಿದರೆ ನಾವೇ ಓದಬೇಕು ಎಂದು ಹತಾಶೆಯಿಂದ ನುಡಿಯುತ್ತಾರೆ. ದೂರ ಸಂಪರ್ಕ ಇಲಾಖೆಗಳಲ್ಲೂ ಸೂಪರ್‌ವೈಸರ್‌ಗಳು ಇನ್ನಿತರೆ ಪುರುಷ ಸಿಬ್ಬಂದಿ ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವ ಮಹಿಳಾ ಆಪರೇಟರುಗಳಿಗೆ ಫೋನ್ ಮೂಲಕ 'ಅಶ್ಲೀಲ ಮಾತುಗಳು' ರವಾನಿಸಿ ಅವರಿಗೆ ಕಿರುಕುಳ ನೀಡುವುದುಂಟು. ಒಂದು ವೇಳೆ ಈ ಮಹಿಳೆಯರು ಇವರ ವಿರುದ್ಧ ದೂರು ಕೊಟ್ಟರೆ ಆ ಗಂಡಸರಿಂದ ಇವರನ್ನು ರಕ್ಷಿಸುವವರ್‍ಯಾರು? ನಮ್ಮ ಕೆಲಸ ಮುಗಿಸಿ ರಾತ್ರಿ ಮನೆಗೆ ಹೋಗುವಾಗ ನಮ್ಮನ್ನು ಯಾರು ರಕ್ಷಿಸುತ್ತಾರೆ? ಎನ್ನುವುದು ಇವರ ಪ್ರಶ್ನೆ.

ಹೀಗೆ ಹಲವಾರು ಸುಧಾರಣೆಗಳನ್ನು ಸರ್ಕಾರ ನ್ಯಾಯಾಲಯ ಮಾಡಿದರೂ ಅದು ಜಾರಿಯಾಗುವಲ್ಲಿ ಅನೇಕ ಸಿಕ್ಕುಗಳಿವೆ. ಆದ್ದರಿಂದ ಈ 'ಲೈಂಗಿಕ ಕಿರುಕುಳ' ಶಿಕ್ಷಾರ್ಹ ಅಪರಾಧ ಎನ್ನುವುದು ಪುರುಷರಿಗೆ ಹಾಗೂ ಸ್ತ್ರೀಯರಿಗೆ ಅರ್ಥವಾಗುವ ಹಾಗೆ, ಅವರಿಗೆ ಕೆಲಸದ ವೇಳೆಯಲ್ಲಿ 'ತರಬೇತಿ' ನೀಡಬೇಕು. ಆಗ ಅಂಥ ಅಪರಾಧ ಎಸಗುವ ಪುರುಷರಿಗೆ ಯಾವ ರೀತಿಯ ವರ್ತನೆ ಸ್ತ್ರೀಯರನ್ನು ನೋಯಿಸಬಹುದು? ನಾವು ಹೇಗೆ ವರ್ತಿಸಬೇಕು ಎನ್ನುವ ಅರಿವು ಮೂಡುತ್ತದೆ. ಹಾಗೇ ಹೆಂಗಸರಿಗೂ ಯಾವ ವಿಷಯದಲ್ಲಿ ತಾವು ರಾಜಿಯಾಗಬಾರದು? ಯಾವ ಬಗೆಯ ಅಪರಾಧದ ವಿರುದ್ಧ ತಾವು ಪ್ರತಿಭಟಿಸಬೇಕು ಎನ್ನುವ ಅರಿವು ಮೂಡುತ್ತದೆ.

ಕಾರ್ಮಿಕ ವಕೀಲರಾದ ಶ್ರೀಮತಿ ಗಾಯತ್ರಿ ಸಿಂಗ್‌ರವರ ಪ್ರಕಾರ ಈಗ ಸಾರ್ವಜನಿಕ ಇಲಾಖೆಗಳಲ್ಲಿ ಈ ಮಾರ್ಗಸೂಚಿಯನ್ನು ಜಾರಿಗೊಳಿಸುವಂತೆ ಕಾರ್ಮಿಕರು ಅಧಿಕಾರಿಗಳನ್ನು ಒತ್ತಾಯಿಸಬಹುದು. ಹಾಗೂ ಅನೇಕ ಸಾರ್ವಜನಿಕ ಇಲಾಖೆಗಳು ಇದನ್ನು ಅನುಷ್ಠಾನಗೊಳಿಸಲು ಮುಂದೆ ಬರುತ್ತಿವೆ. ಹಾಗೂ ಮುಖ್ಯವಾಗಿ ಈ ಮಾರ್ಗಸೂಚಿಯ ಮೂರನೆ ಅಂಶವನ್ನು ಅವು ಸ್ವಾಗತಿಸಿವೆ. ಆದರೆ ಕೆಲವು ಪುರುಷ ಕಾರ್ಮಿಕ ಮುಖಂಡರು ಇದಕ್ಕೆ ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಏಕೆಂದರೆ ತಮ್ಮ ವಿರುದ್ಧ ಸಂಚು ಮಾಡಲು ಹಾಗೂ ವ್ಯಕ್ತಿ ವೈಷಮ್ಯದಿಂದ ಯಾರಾದರೂ ಈ ಕಾನೂನನ್ನು ಅಸ್ತ್ರವಾಗಿ ಬಳಸಿಕೊಳ್ಳಬಹುದಾಗಿದೆ. ಹಾಗಾಗಿ ಒಂದು ವೇಳೆ ಅಪರಾಧ ಮಾಡದೇ ಇದ್ದಾಗ್ಯೂ ತಮ್ಮ ಪ್ರತಿಸ್ಪರ್ಧಿಗಳು ಈ ಕಾನೂನಿನ ದುರುಪಯೋಗ ಮಾಡಿಕೊಂಡು ಅನಗತ್ಯವಾಗಿ ವ್ಯಕ್ತಿಗಳನ್ನು ಸಂಕಷ್ಟದಲ್ಲಿ ಸಿಲುಕಿಸಬಹುದಾಗಿದೆ ಎನ್ನುವುದು ಅವರ ವಾದ.

ಹಾಗೇ ಕೆಲವು ಮಹಿಳಾ ಕಾರ್ಮಿಕರು "ಈ ಹಿಂದೆ ಇದ್ದಂತೆ ಅಂಥ ಸಂದರ್ಭಗಳಲ್ಲಿ ಕಾರ್ಖಾನೆಯ ಮಾಲೀಕರು ಮತ್ತು ಇತರ ಸಮಿತಿಗಳು ಅನೌಪಚಾರಿಕವಾಗಿ ವಿಚಾರಣೆ ನಡೆಸುತ್ತಾ ಇದ್ದಂತೆ ಇದ್ದರೆ ಒಳ್ಳೆಯದೇನೋ. ಇಲ್ಲವಾದಲ್ಲಿ ಅಂಥ ಸಂದರ್ಭದಲ್ಲಿ ಅಪರಾಧಿಗಳನ್ನು ಉಗ್ರ ಶಿಕ್ಷೆಗೆ ಗುರಿ ಮಾಡಿದಾಗ ಗಂಡಸರಿಂದ ತೀವ್ರ ಪ್ರತಿರೋಧ ವ್ಯಕ್ತವಾಗಬಹುದು ಎಂಬ ಅನಿಸಿಕೆ ವ್ಯಕ್ತಪಡಿಸುತ್ತಾರೆ.

●

### ಓದುಗರಿಗೊಂದು ಮನವಿ

ಕಳೆದ ಹತ್ತು ವರ್ಷಗಳಿಂದ ಮಾನಸ ತಿಂಗಳ ಪತ್ರಿಕೆಯನ್ನು ಓದುಗರ ಹಾಗೂ ಸಹೃದಯರ ಸಹಕಾರದಿಂದ ಪ್ರಕಟಿಸುತ್ತಿದ್ದೇವೆ. ಯಾವುದೇ ಸಂಸ್ಥೆಯ ಹಾಗೂ ಸರ್ಕಾರದ ನೆರವಿಲ್ಲದೆ, ಸ್ವಾಯತ್ತವಾಗಿ ಮಹಿಳೆಯರೇ ಮಾನಸ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ. ಕರ್ನಾಟಕದ ಮಹಿಳಾ ಚಳುವಳಿಯಲ್ಲಿ ಮಾನಸದಂತಹ ಪತ್ರಿಕೆಯ ಪಾತ್ರ ಮಹತ್ತರವಾದುದೆಂದು ನಾವು ನಂಬಿದ್ದೇವೆ. ನಮ್ಮ ಈ ನಂಬಿಕೆಗೆ ಕಳೆದ ಹತ್ತು ವರ್ಷಗಳಿಂದ ನೀರೆರೆದು ಪೋಷಿಸಿದವರು ನೀವು. ಆದರೆ ಮಾನಸ ಪ್ರಕಟಣೆಯ ಹಾದಿ ಸುಗಮವಾದುದೇನಲ್ಲ. ಪ್ರತಿ ವರ್ಷವೂ, ಗೊಂದಲ, ಹತಾಷೆ, ಅಧೈರ್ಯದ ಸ್ಥಿತಿಯಲ್ಲಿಯೇ ಮಾನಸವನ್ನು ಪ್ರಕಟಿಸುತ್ತಾ ಬಂದಿದ್ದೇವೆ.

ವರ್ಷಕ್ಕೊಮ್ಮೆ (ಪ್ರತಿ ವರ್ಷವೂ) ಪತ್ರಿಕೆಗೆ 200-00 ರೂ. ಅಥವಾ 100/- ರೂ.ಗಳನ್ನು ಕೊಡುಗೆಯಾಗಿ ನೀಡಬೇಕೆಂದು ತಮ್ಮನ್ನು ಕೋರುತ್ತೇವೆ. 25/- ರೂ. ಅಥವಾ 50/- ರೂ.ಗಳನ್ನು ನೀಡಬಯಸುವವರು ಪ್ರತಿ ತಿಂಗಳೂ ಕಳಿಸಿ ಕೊಡಬಹುದು. ಇದುವರೆಗೆ ಮಾನಸ ಪತರಿಕೆಯ ಪ್ರಕಟಣೆಗೆ ನೀರೆರೆದ ಸಹೃದಯರು ಮಾನಸವನ್ನು ಉಳಿಸಿ ಬೆಳೆಸುವಲ್ಲಿ ನೆರವಾಗಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ. ನೀವು ನೀಡುವ ಈ ಕೊಡುಗೆ ಪತ್ರಿಕೆಯ ಪ್ರಕಟಣೆಗೆ ನೆರವಾಗುವುದಲ್ಲದೆ, ಮಾನಸದ ಇತರ ಚಟುವಟಿಕೆಗಳಿಗೂ ನೆರವಾಗುತ್ತದೆ.

# ಒಂದು ಸಾವಿನ ಸುತ್ತ (ಕಥನ ಕವನ)

ದಟ್ಟ ಜನಜಂಗುಳಿಯು
ನೆಟ್ಟ ನೋಟದ ಜನರು
ಮುಚ್ಚಿದಾ ಬಾಗಿಲು
ಒಳಗೆ ಕಮರಿದ ಕುಡಿಯು

'ಏನಾಯ್ತು? ಏನಂತೆ
ಬಾಗಿಲೇ ತೆರೆದಿಲ್ಲ
ದಿನವೆರಡು ಕಳೆದಿದೆ
ಒಳಗೆ ಕತ್ತಲು ಹರಡಿದೆ'

'ದಾರಿ ಬಿಡಿ ದಾರಿ ಬಿಡಿ'
ಗುಲ್ಲೋ ಗುಲ್ಲು
ನಿಶ್ಶಬ್ದ ಆವರಿಸಿತ್ತು
ಎಲ್ಲ ಕಡೆಯಲ್ಲೂ

ಮುದಿ ವಯಸ್ಸಿನ
ಗೂನು ಬೆನ್ನಿನ
ರೋದಿಸುವ ತಾಯಿ
ಎಡವುತ್ತ ತಡಕುತ್ತ
ಕಣ್ಣೀರು ಸುರಿಸುತ್ತ
ಬಂದು ನಿಂತಳು ಆಕೆ
ಮುಚ್ಚಿದಾ ಬಾಗಿಲಿನ
ಗೌಪ್ಯದೆದುರು.

ಮನೆ ಕಟ್ಟಿಸಿದಳು
ತೋಟವನು ಕೊಂಡಳು
ಸುಖದ ಸುಪ್ಪತ್ತಿಗೆಯಲಿ
ಓಲಾಡಿಸಿದಳೆನ್ನ
ಎತ್ತ ಹೋದೆಯೇ ಮಗಳೇ
ಸತ್ತೇ ಹೋಗಿರುವೆಯೇನು?
ಅಯ್ಯೋ, ನನ್ನ ತಾಯಿ
ಎದ್ದು ಬಾಗಿಲ ತೆಗೆಯೇ
ನೀ ಮೆರೆದ ದಿನಗಳು
ಕಾಪಾಡಲಿಲ್ಲವೇ ನಿನ್ನ?
ನೀ ಪೊರೆದ ಮನುಜರು
ಕಷ್ಟಕಾಗಲಿಲ್ಲವೇ ನಿನಗೆ?
ಅಯ್ಯೋ, ಅಣ್ಣ ತಮ್ಮಂದಿರಾ
ಒಡೆಯಿರಿ ಬಾಗಿಲನು
ತೋರಿ ಕೊಡಿ ಮಗಳನ್ನು
ಹೇಳಲಾರೆ ನನ್ನೆದೆಯ ಅಳಲು
ಆಲಾಪಿಸಿದಳು ಬಡತಾಯಿ!

'ಕಂಡಿರಲಿಲ್ಲ ಇಂಥ ನಟಿಯನ್ನು
ಮಿನುಗುತಾರೆಯ ಹೊಳಪನ್ನು
ಏರಿದಳು ಎಂಥ ಪ್ರಸಿದ್ಧಿಗೆ!
ಬರಬಾರದಿತ್ತು ಇಂತ ಗತಿ ಇವಳಿಗೆ'
ನೆರೆದ ಜನರ ಪಿಸು ಮಾತು
ಬದುಕೊಂದು ಒಳಗಡೆ
ಹೋಗಿತ್ತು ಹೂತು!

ಬಂದರು ಪೋಲಿಸು
ಅಧಿಕಾರಿ ದಂಡು
ಕಿಕ್ಕಿರಿದು ನೆರೆದಿತ್ತು
ಜನರ ಹಿಂಡು
ಬಾಗಿಲನು ಒಡೆದರು
ಜನರ ಹಿಂದೆ ದೂಡಿದರು

ಅಂಗಾತ ಮಲಗಿತ್ತು ಶವ
ಬಿಳಿಯ ಹಾಸಿಗೆ ಮೇಲೆ
ಶಾಂತ ಮುಖಮುದ್ರೆ
ಇರಲಿಲ್ಲ ಅವಳ ವಜ್ರದೋಲೆ

ನುಗ್ಗಿದರು ಜನರು
ಕುಗ್ಗಿದರು ನೋಡಿ ಶವ
ತಾಯ ರೋದನಕೆ ಇಲ್ಲ ಮಿತಿ
ಆಗಲೇ ಬಂದಳೊಬ್ಬ ಗೆಳತಿ

'ದಿನವೆರಡರ ಹಿಂದೆ
ನಾನವಳ ಕಂಡಿದ್ದೆ
ಮನದಲೇನೋ ಇತ್ತು

ಬರಿ ನಕ್ಕಳವಳು
ಶೂಟಿಂಗು ಇತ್ತೆಂದು
ಮನೆ ಬಿಟ್ಟು ಬಂದವಳು
ಹೆಣವಾಗಿ ಮಲಗಿಹಳು
ಕಾಡಿಸಿತು ಏನವಳ
ಯಾವುದೋ ಗೋಳು?'
ವಿಚಲಿತಳು ಗೆಳತಿ!

ಹೆಣವ ತೆಗೆದರು ಹೊರಗೆ
ಮಾಡಿದರು ಮಹಜರು
ಸತ್ತ ತಾರೆಯ ಪತ್ರದಲಿ
ಇತ್ತು ಬರಿ ಎರಡೇ ಸಾಲು
'ನನ್ನ ಹತ್ಯೆಗೆ ನಾನೇ ಹೊಣೆ
ನಾನೊಂದು ತಂತಿ ಕಿತ್ತ ವೀಣೆ'

ವಜ್ರದೋಲೆಯ ಕೊಟ್ಟಿದ್ದ
ಅಭಿಮಾನಿ ಮಂತ್ರಿ
ಸುತ್ತಲೂ ತಿರುಗುತ್ತಿದ್ದ
ಅವಳಿಗವ ಬಾಜಾಬಜಂತ್ರಿ!

ತಾರಕವನ್ನೇರಿದ್ದಳು
ಪ್ರಶಸ್ತಿಗಳ ಸರಮಾಲೆ
ಕಾಲಡಿಗೆ ಸಂಪತ್ತು
ಅಭಿಮಾನಿಗಳ ಸಾವಿರೋಲೆ

'ಎಲ್ಲ ಇದ್ದರೂ ನೀನೇಕೆ ಹೋದೆ
ನೀನಿಲ್ಲದೆ ನಾನೀಗ ಅನಾಥೆಯಾದೆ'
ಎನ್ನುತ್ತ ಹೋದಳು ತಾಯಿ ಮೂರ್ಛೆ

ಬರೆಯದೆ ಬಿಟ್ಟಿರುವ ಸಾಲುಗಳಲ್ಲೇ
ಇದೆ ನಟಿಯ ಬಾಳವಿಮರ್ಶೆ

ಅಭಿಮಾನಿ ಮಂತ್ರಿಗಿಂದು
ಒಳಗೊಳಗೇ ಹೆದರಿಕೆ
ಎಷ್ಟೋ ಸಲ ನೀಡಿದ್ದ
ಸಿಹಿಮುತ್ತನವಳ ಅಧರಕೆ
ಹೆಣವ ನೋಡಲೂ ಇಲ್ಲ
ಅದರ ಪರಿಣಾಮ ಬಲ್ಲ
ಮೀಡಿಯಾ ಸಂದೇಶ ಕೊಟ್ಟು
ನಿಟ್ಟುಸಿರೊಂದ ಬಿಟ್ಟ

ಮರುದಿನವೇ ಅಭಿಮಾನಿಗಳ
ಸಂತಾಪ ಸೂಚಕ ಸಭೆ
ಸತ್ತ ತಾರೆಯ ದೊಡ್ಡ ಕಟೌಟು
ಅಲ್ಲಿ ಮಂತ್ರಿಯ ಭಾಷಣದ ಗಿಲೀಟು
ಸತ್ತ ತಾರೆಯ ಹೆಸರಿನಲ್ಲೊಂದು ಪ್ರಶಸ್ತಿ
ಬಡಿಂಗ್ ತಾರೆಯೊಬ್ಬಳಿಗೆ ಸ್ಫೂರ್ತಿ

ಹಣ ಸಂಪತ್ತು ಪ್ರಸಿದ್ಧಿ
ಲಭಿಸಿದರೂ ಎಲ್ಲ
ಪ್ರೀತಿಸಿದವ ಕೊಟ್ಟ
ವಜ್ರದೋಲೆಯ ಸುಡಿಗಟ್ಟಿ
ನುಂಗಿ ಕರುಳನೇ ಕತ್ತರಿಸಿಕೊಂಡು
ಬಿಗಿಯಲಾರದ ತನ್ನ ಬದುಕಿಗೆ
ಅಂತ್ಯ ಹಾಡಿದ ತಾರೆಯ
ಸಾಲಿಗೆ ಸೇರದಿರೆನ್ನ
ಸಹೋದರಿ ನಟಿಯರೇ

- ಎಸ್. ಮಾಲತಿ

ಇತ್ತೀಚೆಗೆ ರಾಜಾಸ್ಥಾನದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಪ್ರಮಾಣ ಹೆಚ್ಚುತ್ತಿದೆ. ಶಿಕ್ಷಕರೊಬ್ಬರು ಬಾಲಕಿಯನ್ನು ತನ್ನ ಕೊಠಡಿಗೆ ಕರೆದು ಅತ್ಯಾಚಾರ ನಡೆಸಿದ್ದು, ದೃಢಪಟ್ಟಿದ್ದು ಈ ವಿಷಯ ಕುರಿತು ವಿವರವಾಗಿ ತನಿಖೆ ನಡೆಸಿದ ಮಾನವ ಹಕ್ಕುಗಳ ಆಯೋಗ ಗರ್ಭಿಣಿಯಾದ ಬಾಲಕಿಗೆ ಒಂದು ಲಕ್ಷ ರೂ. ಮಧ್ಯಂತರ ಪರಿಹಾರ ನೀಡಬೇಕೆಂದು ಆದೇಶ ನೀಡಿದೆ.

# ಪ್ರತಿಕ್ರಿಯೆ

ಮಾನಸ ಪತ್ರಿಕೆಯ ವಿಷಯಗಳು ಚೆನ್ನಾಗಿವೆ. ಈ ಪತ್ರಿಕೆಯನ್ನು ಮಹಿಳೆಯರೇ ನಡೆಸುತ್ತಿರುವಿರಿ. ಇದು ಸಂತೋಷದ ವಿಷಯ.

**H. B. ಸುರೇಶ್, ತುಮಕೂರು.**

ಜೂನ್ ಸಂಚಿಕೆಯಲ್ಲಿ ಸ್ಥಳಾಂತರದ ಸಮಸ್ಯೆ, ಮಹಿಳೆ ಸಾಕ್ಷಿ ಸಾಕು, ಮುಳುಗಡೆ ಹಾವಳಿ, ಸಂಪಾದಕೀಯ ಮೊದಲಾದವುಗಳನ್ನು ಓದಿ, ಮರೆಯುವಂತಿಲ್ಲ. ಚಡಪಡಿಕೆ ಕವನ ಸಮಯೋಚಿತವಾಗಿದೆ. ನಿಮ್ಮ ಪತ್ರಿಕೆಗೆ ಶುಭ ಹಾರೈಕೆ.

**ನರಸಿಂಹ ಗುಪ್ತ, ಬಿಳಿಚಕ್ರ, ಕಲಬುರ್ಗಿ**

ಮಹಿಳೆಯರ ಹಕ್ಕುಗಳಿಗಾಗಿ ದನಿ ಎತ್ತುವ ಇಂತಹ ವಿಶಿಷ್ಟ ಪತ್ರಿಕೆಯನ್ನು ನಾವೆಲ್ಲ ಕೊಂಡು ಓದಿ ಬೆಳೆಸಬೇಕಾದುದು ಆದ್ಯ ಕರ್ತವ್ಯ.

**ಶ್ರೀಮತಿ ಕೆ. ಶೈಲಾಕುಮಾರಿ, ಹಾಸನ**

ನಿಮ್ಮ ಪ್ರಯತ್ನ, ಪ್ರಗತಿಗಳು, ಪ್ರಶಂಸನೀಯ, ಮಹಿಳೆಯರಿಗಾಗಿ, ಮಹಿಳೆಯರಿಂದಲೇ, ಮಹಿಳೆಯರೇ ನಡೆಸುವ ಪತ್ರಿಕೆ ಅಂತ ಕೇಳಿ ಖುಷಿಯಾಯಿತು. ಇನ್ನು ಅನೇಕ ವಿವಿಧತೆಗಳನ್ನು ಅಳವಡಿಸಿ ಪತ್ರಿಕೆಯನ್ನು ಪ್ರಕಟಿಸಿ, ಆರೋಗ್ಯ ಕುರಿತು, ಕಾನುನನ್ನು ಕುರಿತು, ಶಿಕ್ಷಣ ಉದ್ಯೋಗ ಕುರಿತು....... ಹೀಗೆ ಎಲ್ಲಾ ಕ್ಷೇತ್ರದ ಕಡೆಗೂ ಗಮನ ಹರಿಸಿ ಸವಿವರವಾಗಿ ಬರೆಯಿರಿ. ನಿಮ್ಮೆಲ್ಲ ಯೋಜನೆಗಳು ಯಶಸ್ವಿಯಾಗಿ ನೆರವೇರಲಿ, ಪತ್ರಿಕೆ ಬೆಳೆಯಲಿ, ಬೆಳಗಲಿ, ಬೆಳಗಾಗಲಿ.

**ಜಿ. ರಮೇಶ್ ಆಚಾರ್ ಗುಂಡ್ಮಿ, ಉಡುಪಿ**

ಮಾನಸ ಚೆನ್ನಾಗಿ ಮೂಡಿ ಬರುತ್ತಿದೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರೇ ಸೇರಿ ಒಂದು ಮಾಸ ಪತ್ರಿಕೆ ನಡೆಸುತ್ತಿರುವುದು ತುಂಬಾ ಕಷ್ಟಕರ. ಆ ಕಷ್ಟವೇ ಪುರುಷ ಪ್ರಧಾನ ಸಮಾಜಕ್ಕೆ ಹಾಕುವ ಸವಾಲಾಗಬೇಕು. ಅದರಲ್ಲೂ ಕಳೆದ ಹತ್ತು ವರ್ಷಗಳಿಂದ, ಮಾನಸ ಬರುತ್ತಿರುವುದು ತುಂಬಾ ಸೋಜಿಗದ ಕೆಲಸ.

ನಿಮಗೆ ಮಹಿಳೆಯರ ಕಷ್ಟ ಚೆನ್ನಾಗಿ ಗೊತ್ತಿದೆ. ಇಲ್ಲಿಯ ಈ ವ್ಯವಸ್ಥೆ, ಈ ಕಾನೂನು, ಈ ಸಂಪ್ರದಾಯ ಮಹಿಳೆಯರನ್ನು ನುಂಗಿ ಹಾಕಿದೆ. ಮೂಢನಂಬಿಕೆಯ ಕೊಂಡಿಯಲ್ಲಿ ಸಿಕ್ಕಿ ನರಳುತ್ತಿರುವ ಮಹಿಳೆಗೆ, ಸ್ತ್ರೀ ವಿಮೋಚನಾ ಕಾನೂನು ಕೇವಲ ಕಾಗದದಲ್ಲಿ ಮಾತ್ರ ಉಳಿದಿದೆ. ಸತಿಪದ್ಧತಿಯಲ್ಲಿ ಸುಟ್ಟು ಕರಕಾಗಿ ಹೋದ ರೂಪ ಕನ್ವರಳ ಪ್ರಕರಣದಲ್ಲಿ, ಒಬ್ಬ ದಕ್ಷ ಸಾಕ್ಷಿಯನ್ನು ನ್ಯಾಯಾಲಯದಲ್ಲಿ ನಿಲ್ಲಿಸಲು ಸಾಧ್ಯವಾಗದೆ, ಇಲ್ಲಿಯ ಪ್ರಾಸಿಕ್ಯೂಷನ್ ಸೋತಿದೆ. ಇಂಥ ಕೊಳಕು ವ್ಯವಸ್ಥೆಗೆ ಏನೆನ್ನಬೇಕು.

ನಿಮಗಿದು ಪಕ್ವಕಾಲ, ಮಾನಸವೂ ಜೊತೆಗಿದೆ. ನೀವೆಲ್ಲರೂ ಸೇರಿ ನಮ್ಮ ಬೆಂಬಲದೊಂದಿಗೆ ಪಾನ ನಿಷೇಧ ಆಂದೋಲನವನ್ನು ಯಾಕೆ ಆರಂಭಿಸಬಾರದು?

**ಮಾದನಾಯಕನಹಳ್ಳಿ ರಂಗಪ್ಪ, ಚಿತ್ರದುರ್ಗ**

ಮಹಿಳೆಯರ ಉನ್ನತಿಗಾಗಿ, ಅವರ ಸಮಸ್ಯೆಗಳ ನಿವಾರಣೆಗಾಗಿ ಮಹಿಳೆಯರೇ ಸ್ವತಃ ನಡೆಸುತ್ತಿರುವ ಮಾನಸ ತುಂಬಾ ಚೆನ್ನಾಗಿ ಮೂಡಿ ಬರುತ್ತಿದೆ. ಮಾನಸ ಇನ್ನೂ ಎತ್ತರಕ್ಕೆ ಬೆಳೆಯಲೆಂದು ಹಾರೈಸುತ್ತೇವೆ.

**ಶ್ರೀಮತಿ ಶಾರದಾ ಮ., ಉಪನ್ಯಾಸಕಿ**
**ದುಂದೂರ, ಹುಲಕೋಟೆ**

## ಮೀಸಲಾತಿ ಒಂದು ಮುಂದುವರಿದ ಚರ್ಚೆ

## ಮಹಿಳೆಯರಿಗೆ ರಾಜಕೀಯ ಮೀಸಲಾತಿ - ದ. ಸಂ. ಸ. ನಿಲುವು

ಪುರುಷ ಪ್ರಧಾನ ಬ್ರಾಹ್ಮಣವಾದಿ ಸಮಾಜದಲ್ಲಿ ಮಹಿಳೆಯರು ಸದಾ ಎರಡನೇ ದರ್ಜೆಯವರಾಗಿದ್ದಾರೆ. ಹಿಂದೂ, ಕ್ರೈಸ್ತ, ಮುಸಲ್ಮಾನ ಹೀಗೆ ಯಾವುದೇ ಧರ್ಮಗಳಿಗೆ ಸೇರಿದ್ದರೂ, ಈ ಧರ್ಮಗಳಲ್ಲಿನ ಯಾವುದೇ ಜಾತಿ/ಪಂಗಡಗಳಿಗೆ ಸೇರಿದ್ದರೂ ಮಹಿಳೆಯರು ಶೋಷಿತರಾಗಿದ್ದಾರೆ. ವಿದ್ಯೆಯನ್ನು, ಉದ್ಯೋಗವನ್ನು ಹಾಗೂ ಆಸ್ತಿಯನ್ನು ಪಡೆಯಲು ಮಹಿಳೆಯರು ನಿರಂತರ ಹೋರಾಟ ನಡೆಸಿ ಯಶಸ್ವಿಯಾಗಿದ್ದಾರೆ. ವಿದ್ಯೆ-ಉದ್ಯೋಗ ಎರಡೂ ಕ್ಷೇತ್ರಗಳಲ್ಲಿ ಈಗ ಮಹಿಳೆಯರು ಹೆಚ್ಚಿನ ಸಾಮರ್ಥ್ಯವನ್ನು ತೋರಿದ್ದು ಸಾಬೀತಾಗಿದೆ.

ಈಗ ಮಹಿಳೆಯರು ಶಾಸನ/ನೀತಿ ರೂಪಿಸುವ ಕ್ಷೇತ್ರದಲ್ಲಿ ತಮಗೆ ಅವಕಾಶ ಸಿಕ್ಕಬೇಕೆಂದು ಪ್ರತಿಪಾದಿಸುತ್ತಿದ್ದಾರೆ. ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಈಗಾಗಲೇ ಕಡ್ಡಾಯ ಪ್ರಾತಿನಿಧ್ಯ ಪಡೆದಿರುವ ಮಹಿಳೆಯರು ಈಗ ಲೋಕಸಭೆ, ರಾಜ್ಯಗಳ ವಿಧಾನಸಭೆ (ಹಾಗೂ ರಾಜ್ಯಸಭೆ - ರಾಜ್ಯಗಳ ವಿಧಾನ ಪರಿಷತ್ತು)ಗಳಲ್ಲೂ ತಮಗೆ ಕಡ್ಡಾಯ ಪ್ರಾತಿನಿಧ್ಯ ಬೇಕೆಂದು ಆಗ್ರಹಪಡಿಸುತ್ತಿದ್ದಾರೆ. ಬ್ರಾಹ್ಮಣವಾದಿ ಪುರುಷಪ್ರಾಧ್ಯಾನ್ಯವನ್ನೇ ಒಪ್ಪಿಕೊಂಡಿರುವ ರಾಜಕೀಯ ಪಕ್ಷಗಳು ಹಾಗೂ ಸರ್ಕಾರಗಳು ಮಹಿಳೆಯರ ಈ ಹಕ್ಕೊತ್ತಾಯವನ್ನು ತತ್ವಶಃ ಹಾಗೂ ಮನಃಪೂರ್ವಕವಾಗಿ ಒಪ್ಪಿಕೊಂಡಿರದಿರಬಹುದು; ಆದರೆ ತಮ್ಮ ವೋಟಿನ ರಾಜಕಾರಣದ ಯಶಸ್ಸಿಗಾದರೂ ಅವುಗಳು ಈ ಹಕ್ಕೊತ್ತಾಯವನ್ನು ಈಡೇರಿಸಲೇಬೇಕಾಗಿದೆ.

ಈ ಹಿನ್ನೆಲೆಯಲ್ಲಿ 1995ರ ಸಾರ್ವತ್ರಿಕ ಚುನಾವಣೆ ಕಾಲದಲ್ಲೇ ಬಹುತೇಕ ಎಲ್ಲಾ ರಾಜಕೀಯ ಪಕ್ಷಗಳು "ಮಹಿಳೆಯರಿಗೆ ಶೇ. 33ರಷ್ಟು ಮೀಸಲಾತಿ" ನೀತಿಯನ್ನು ಒಪ್ಪಿರುವುದಾಗಿ ಪ್ರಕಟಿಸಿದವು; ಈ ಅಂಶವನ್ನು ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ಸೇರಿಸಿಕೊಂಡವು.

ಸಂಯುಕ್ತರಂಗ ಸರ್ಕಾರದ "ಸಾಮಾನ್ಯ ಕನಿಷ್ಠ ಕಾರ್ಯ ಕ್ರಮ" (Common Minimum Programmes) ಗಳಲ್ಲೂ ಕೂಡಾ ಈ ಅಂಶವು ಸೇರಿಕೊಂಡಿತು. ಸಂಯುಕ್ತ ರಂಗದ ಪಕ್ಷಗಳ ಸದಸ್ಯರನ್ನು ಒಳಗೊಂಡ ಒಂದು ಅಧ್ಯಯನ ಸಮಿತಿಯನ್ನು ಸಿಪಿಐ ಸಂಸತ್ ಸದಸ್ಯೆ ಗೀತಾ ಮುಖರ್ಜಿ ನೇತೃತ್ವದಲ್ಲಿ ರಚಿಸಲಾಯಿತು; ಈ ಸಮಿತಿ ದೇಶದ ವಿವಿಧ ರಾಜ್ಯಗಳಿಗೆ ಭೇಟಿ ನೀಡಿ, ಅಭಿಪ್ರಾಯ ಸಂಗ್ರಹಿಸಿ ಕೇಂದ್ರ ಸರ್ಕಾರಕ್ಕೆ ಪೂರಕವಾದ ಶಿಫಾರಸು ಮಾಡಿತು.

ಪ್ರಧಾನಿ ಗುಜ್ರಾಲ್ ಅವರು ದಿನಾಂಕ 17-5-1997ರಂದು ಲೋಕಸಭೆಯಲ್ಲಿ ಈ ಬಗ್ಗೆ ಸಂವಿಧಾನ ತಿದ್ದುಪಡಿ ಮಸೂದೆಯನ್ನು ಮಂಡನೆ ಮಾಡಲು ಹೊರಟಾಗ, ಹಿಂದುಳಿದ ವರ್ಗಗಳ ಹಾಗೂ ಧಾರ್ಮಿಕ ಅಲ್ಪಸಂಖ್ಯಾತ ಸಂಸತ್ ಸದಸ್ಯರ ತೀವ್ರ ಪ್ರತಿಭಟನೆಯಿಂದಾಗಿ ಹಿಮ್ಮೆಟ್ಟಬೇಕಾಯಿತು. ತಿದ್ದುಪಡಿ ಮಸೂದೆ ಮಂಡನೆಯಾಗಲಿಲ್ಲ.

ಸಂವಿಧಾನ ತಿದ್ದುಪಡಿ ಮಸೂದೆ ಬಗ್ಗೆ ಕೇಂದ್ರ ಸರ್ಕಾರವು ಜನತಾ ದಳದೊಳಗೆ, ಸಂಯುಕ್ತ ರಂಗದ ಪಕ್ಷಗಳೊಳಗೆ ಹಾಗೂ ಪ್ರತಿ ಪಕ್ಷಗಳೊಂದಿಗೆ ಸಮಾಲೋಚನೆಯನ್ನು ನಡೆಸಲಿಲ್ಲ; ಒಮ್ಮತಕ್ಕೆ ಬರಲು ಪ್ರಯತ್ನಿಸಲಿಲ್ಲ; ತರಾತುರಿಯಲ್ಲಿ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಲು ಪ್ರಧಾನಿ ಹೊರಟರು; ಜನತಾದಳದ ಕಾರ್ಯಾಧ್ಯಕ್ಷ ಶರದ್ ಯಾದವ್ ಅವರೂ ಸೇರಿದಂತೆ ಹಲವಾರು ಜನ ತಿದ್ದುಪಡಿ ಮಸೂದೆ ಬಗ್ಗೆ ವಿರೋಧ ವ್ಯಕ್ತಪಡಿಸಿದ್ದಾರೆ.

ಶಾಸನ ಸಭೆಗಳಲ್ಲಿ ಶೇ. 33ರಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡಬೇಕೆಂಬ ಮಸೂದೆಯಲ್ಲಿ "ಹಿಂದುಳಿದ ವರ್ಗ ಹಾಗೂ ಧಾರ್ಮಿಕ ಅಲ್ಪಸಂಖ್ಯಾತರಿಗೆ ಅವರವರ ಜನಸಂಖ್ಯಾ ಪ್ರಮಾಣಕ್ಕೆ ತಕ್ಕಂತೆ ಮೀಸಲಾತಿಯನ್ನು ಒದಗಿಸಬೇಕು" ಎಂಬ ಅಂಶವನ್ನು ಸೇರಿಸಬೇಕೆಂದು, ಮಸೂದೆಗೆ ಅಡ್ಡಿಪಡಿಸಿದ ಸಂಸತ್ ಸದಸ್ಯರು ಆಗ್ರಹಪಡಿಸಿದ್ದಾರೆ.

ತರಾತುರಿಯಲ್ಲಿ ಮಂಡನೆಯಾಗಲಿದ್ದ ಮಸೂದೆಯ ಮೂಲಕ ಆಗಲಿದ್ದ ತೀವ್ರ ಸಾಮಾಜಿಕ ಅನ್ಯಾಯದ ಬಗ್ಗೆ ಚರ್ಚಿಸದೇ, ಶರದ್ ಯಾದವ್ ಮತ್ತಿತರರು ನಡೆದುಕೊಂಡ ವರ್ತನೆಯ ಬಗ್ಗೆಯೇ ದೊಡ್ಡದಾಗಿ ಪ್ರಕಟಿಸಿದ ಸಮೂಹ ಮಾಧ್ಯಮಗಳು ತಮ್ಮ ವರ್ಗ ಹಾಗೂ ಜಾತಿ ಹಿತಾಸಕ್ತಿಯನ್ನು ಬಯಲಾಗಿಸಿವೆ. ಗಂಡಾಂತರದ ಸಮಯದಲ್ಲಿ ಕಠೋರವಾಗಿ ಗಟ್ಟಿ ದನಿ ಎತ್ತಿದ ಶರದ್ ಯಾದವ್ ಮತ್ತಿತರರನ್ನು ಸಾಮಾಜಿಕ ನ್ಯಾಯದ ಪರವಾಗಿರುವ ಎಲ್ಲಾ ಜನ, ಸಂಘ, ಸಂಘಟನೆ, ಪಕ್ಷಗಳು ಬೆಂಬಲಿಸಬೇಕು.

ಮಹಿಳೆಯರಿಗೆ ಶಾಸನ ಸಭೆಗಳಲ್ಲಿ ಶೇ. 33ರಷ್ಟು ಮೀಸಲಾತಿಯನ್ನು ಬೆಂಬಲಿಸುತ್ತಾ ಈ ಕೆಳಕಂಡ ಒತ್ತಾಯಗಳ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ವಿಚಾರ ಸಂಕಿರಣವನ್ನು ನಡೆಸಿ, ಜಾಗೃತಿ ಮೂಡಿಸಲು ಬಯಸಿದೆ.

**ಒತ್ತಾಯಗಳು**

(1) ಮಹಿಳೆಯರಿಗೆ ಶೇ. 33ರಷ್ಟು ಮೀಸಲಾತಿಯ (ಸರ್ಕಾರ, ಪಕ್ಷದ ಹುದ್ದೆಗಳಲ್ಲಿ) ಸಿಕ್ಕಬೇಕು; ಇದರಲ್ಲಿ ಪ. ಜಾತಿ/ಪಂಗಡಗಳ ಮಹಿಳೆಯರಿಗೆ ಹಾಗೂ ಇತರ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಆಯಾ ಜಾತಿ/ಪಂಗಡ/ವರ್ಗಗಳ ಜನಸಂಖ್ಯಾ ಪ್ರಮಾಣಕ್ಕೆ ತಕ್ಕಂತೆ ಮೀಸಲಾತಿ ಸಿಕ್ಕಬೇಕು. (2) ದೇಶದ ಇತರ ಹಿಂದುಳಿದ ವರ್ಗಗಳಿಗೂ ಶಾಸನ ಸಭೆಗಳಲ್ಲಿ ಮೀಸಲಾತಿಯನ್ನು ಒದಗಿಸಬೇಕು. (3) ಪ.ಜಾತಿ/ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರಿಗೆ ಅವರವರ ಜನಸಂಖ್ಯಾ ಪ್ರಮಾಣದಷ್ಟು ಮೀಸಲಾತಿಯು ಶಿಕ್ಷಣ, ಉದ್ಯೋಗ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಕಡ್ಡಾಯವಾಗಿ ಸಿಕ್ಕಬೇಕು. (4) ಮೀಸಲಾತಿಯು ಶೇ. 50ರಷ್ಟನ್ನು ಮೀರಬಾರದೆಂಬ ಸುಪ್ರೀಂ ಕೋರ್ಟಿನ ಆದೇಶವನ್ನು ದೇಶದ ಶಾಸನ ಸಭೆಯು ರದ್ದುಪಡಿಸಬೇಕು; ಮೀಸಲಾತಿ ಮಿತಿ ನಿರ್ಧರಿಸುವ ಹೊಣೆಯನ್ನು ರಾಜ್ಯ ಸರ್ಕಾರಗಳಿಗೆ ಬಿಡಬೇಕು. ●

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067